

# ಸಂಸ್ಕೃತ 'ಶಿವರಹಸ್ಯ'ದಲ್ಲಿ ನಂಬಿಯಣ್ಣನ ಕಥೆ

ಡಾ|| ಎಸ್. ವಿದ್ಯಾಶಂಕರ

**ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ**

ಸಂಪುಟ ೬೭ ಸಂಚಿಕೆ ೨

ಡಿಸೆಂಬರ್ ೧೯೮೨



**ಕನ್ನಡ ಸಾಹಿತ್ಯ ಪರಿಷತ್ತು**

ಚಾಮರಾಜಪೇಟೆ ಬೆಂಗಳೂರು ೧೮

# ಸಂಸ್ಕೃತ 'ಶಿವರಹಸ್ಯ'ದಲ್ಲಿ ನಂಬಿಯಣ್ಣನ ಕಥೆ



ಡಾ|| ಎಸ್. ವಿದ್ಯಾಶಂಕರ

# ಸಂಸ್ಕೃತ 'ಶಿವರಹಸ್ಯ'ದಲ್ಲಿ ನಂಬಿಯಣ್ಣನ ಕಥೆ

ಡಾ|| ಎಸ್. ವಿದ್ಯಾಶಂಕರ

ಹರಿಹರನು ತಮಿಳುನಾಡಿನ ಅರುವತ್ತುಮೂವರು ಪುರಾತನರನ್ನು ಕುರಿತು ಕೃತಿರಚನೆ ಮಾಡುವಾಗ ಕಥಾವಸ್ತುವನ್ನು ಸಂಸ್ಕೃತದಿಂದ ತೆಗೆದುಕೊಂಡಿರಬಹುದೆಂಬ ಊಹೆ ವಿದ್ವಾಂಸರಲ್ಲಿ ನಡೆದಿದೆ. ತಮಿಳುನಾಡಿನ ಈ ಭಕ್ತರನ್ನು ಕುರಿತು ಸಂಸ್ಕೃತದಲ್ಲಿ ಅಗಸ್ತ್ಯ ಭಕ್ತವಿಲಾಸ[1] ಹಾಗೂ ಉಪಮನ್ಯು ಭಕ್ತವಿಲಾಸ[2] ಎಂಬ ಗ್ರಂಥಗಳು ಬಂದಿವೆ. ಇವೆರಡೂ ಕೃತಿಗಳು ಸ್ಕಾಂದ ಮಹಾಪುರಾಣದ ಭಾಗವೆಂದು ಹೇಳಬಹುದು.[3] ಅಗಸ್ತ್ಯ ಮಹರ್ಷಿಗಳಿಂದ ಹೇಳಲಾಗಿದೆ ಎಂಬುದು ಪ್ರತೀತಿಯಲ್ಲಿ ತುವ ಅಭಿಪ್ರಾಯ. ಇದು ತಮಿಳು ಪೆರಿಯಪುರಾಣ ಮತ್ತು ಉಪಮನ್ಯು ಭಕ್ತ ವಿಲಾಸಗಳಿಂದ ಕೆಲವು ವಿವರಣೆಗಳಲ್ಲಿ ಭಿನ್ನವಾಗಿರುತ್ತದೆ.[4] ಉಪಮನ್ಯು ಭಕ್ತವಿಲಾಸ ದಲ್ಲಿ, ಸುಂದರಮೂರ್ತಿ ನಾಯನಾರರು ಬಿಳಿಯ ಆನೆಯನ್ನೇರಿ ಸಶರೀರರಾಗಿ ಕೈಲಾಸವನ್ನು ಪ್ರವೇಶಿಸುತ್ತಿದ್ದಾಗ ಆ ಪರ್ವತದ ತಪ್ಪಲಿನಲ್ಲಿದ್ದ ಉಪಮನ್ಯು ಮಹರ್ಷಿಯು ತನ್ನ ಶಿಷ್ಯರಿಗೆ ಸುಂದರಮೂರ್ತಿಗಳ ಹಾಗೂ ಅವರ 'ತಿರುತ್ತೊಂಡತ್ತೊಗೈ' ಕೃತಿಯಲ್ಲಿ ಬರುವ ಇತರ ಭಕ್ತರ ಕಥೆಗಳನ್ನು ತಿಳಿಯ

---

1 ಇದು ಬನಾರಸ್‌ನಲ್ಲಿ ಪ್ರಕಟವಾಗಿದ್ದು, ಗ್ರಂಥಲಿಪಿಯಲ್ಲಿ ಮದ್ರಾಸಿನಲ್ಲಿ ಅಚ್ಚಾಗಿದೆ.

2 ಇದು ಇನ್ನೂ ಮುದ್ರಣಗೊಂಡಿಲ್ಲ, ಹಸ್ತಪ್ರತಿರೂಪದಲ್ಲಿಯೇ ಇದೆ.

3 J. M. Nallaswamy Pillai : Periyapuranam (Part I) 1924 Introduction, P. xvii

4 Cf. Introduction by Dr. V. V. Ramanan to the Ripon Press Edition of the Tirumantiram.

ಹೇಳುವನು. ಇದರಲ್ಲಿ 'ತಿರುತ್ತೊಂಡತ್ತೊಗೈ'ನ ಉಲ್ಲೇಖವಿರುವುದರಿಂದ ಇದಕ್ಕೆ ತಮಿಳು ಕೃತಿಯಾದ 'ತಿರುತ್ತೊಂಡತ್ತೊಗೈ' ಎಂಬುದು ಮೂಲವೆಂಬುದು ಸ್ಪಷ್ಟವಾಗುತ್ತದೆ. ಇವಲ್ಲದೆ, ಈ ಭಕ್ತರ ಕಥೆಗಳು 'ಶಿವರಹಸ್ಯ' ಎಂಬ ಮತ್ತೊಂದು ಸಂಸ್ಕೃತ ಕೃತಿಯಲ್ಲೂ[5] ಸೇರ್ಪಡೆಯಾಗಿವೆ.

ಶೇಕ್ಕಿಳಾರನ ಪೆರಿಯಪುರಾಣವೂ ಈ ಸಂಸ್ಕೃತ ಕೃತಿಗಳನ್ನು ಅನುಸರಿಸಿಲ್ಲ. ಪೆರಿಯಪುರಾಣದಲ್ಲಿ ಈ ಭಕ್ತರ ಹೆಸರು, ವಾಸಸ್ಥಳಗಳನ್ನು ಉಲ್ಲೇಖಿಸುವಾಗ ಎಲ್ಲೂ ಸಂಸ್ಕೃತ ಕೃತಿಗಳಲ್ಲಿ ಹೇಳಿರುವಂತೆ ಹೇಳಿಲ್ಲ, ತಮಿಳಿನ ಮೂಲ ಹೆಸರುಗಳೇ ಉಲ್ಲೇಖಗೊಂಡಿವೆ. ಆದ್ದರಿಂದ ತಮಿಳು ಪೆರಿಯಪುರಾಣವು ಸ್ವತಂತ್ರವಾದ ಮೂಲಕೃತಿಯಲ್ಲದೆ ಸಂಸ್ಕೃತ ಕೃತಿಯ ಆಧಾರಿತ ಗ್ರಂಥವೆಂದು ಹೇಳಲಾಗದು. ಈ ಭ್ರಮೆಗೆ ಕಾರಣವಾವುದೆಂಬುದನ್ನು ವಿವೇಚಿಸುತ್ತ ಜೆ. ಎಂ. ನಲ್ಲಸ್ವಾಮಿಪಿಳ್ಳೈರವರು ಹೀಗೆ ಹೇಳುವರು: ಪೆರಿಯಪುರಾಣದ 'ತಿರುಮಲೈಚಿರಪ್ಪು' ಎಂಬ ಅಧ್ಯಾಯದಲ್ಲೂ ಸುಂದರಮೂರ್ತಿಗಳು ಕೈಲಾಸ ಪ್ರವೇಶ ಮಾಡುತ್ತಿದ್ದ ಸಂದರ್ಭದಲ್ಲಿ ಉಪಮನ್ಯು ಮಹರ್ಷಿಯು ತನ್ನ ಶಿಷ್ಯರಿಗೆ ಸುಂದರರೇ ಮೊದಲಾದ ಶಿವಶರಣರ ಕಥೆಗಳನ್ನು ಹೇಳಿದಂತೆ ತಂದಿರುವುದು. ಪೆರಿಯಪುರಾಣವನ್ನು ಸಂಸ್ಕೃತಕ್ಕೆ ಭಾಷಾಂತರಿಸಿದವರು ಇದನ್ನು ಉಪಯೋಗಿಸಿಕೊಂಡು ತಮ್ಮ ಕೃತಿಗೆ ಉಪಮನ್ಯುವಿನ ಹೆಸರನ್ನೇ ಕೊಟ್ಟರು.[6]

ಸಂಸ್ಕೃತ ಕೃತಿಗಳಲ್ಲಿ ಬರುವ ಭಕ್ತರುಗಳ ಹೆಸರುಗಳು ತಮಿಳಿನಿಂದ ಭಾಷಾಂತರಗೊಂಡಂತೆ ಕಾಣುತ್ತವೆ. ಉದಾಹರಣೆಗೆ ಇಯರ್‌ಪಗೈ–ಸ್ವಭಾವರಿಪು; ಇಳೈಯಾನ್ ಗುಡಿಮಾಱ–ಇಳಾನಂದ ಕುಟೀಮಾರ; ವಿಱನ್‌ಮಿಂಡ–ವೀರೋದ್ಭಟ; ಇಱಿಭಕ್ತ–ವೀರಭಕ್ತನಾಥ; ಕಣ್ಣಪ್ಪ–ನೇತ್ರಾರ್ಪಕ; ಅರಿವಾಟ್ಟಾಯ–ಶಂಕುಲಾದಾಯ; ಮುರುಘನಾಯನಾರ್–ಸ್ಕಂಧನಾಥ; ಕಾರೈಕ್ಕಾಲಮ್ಮೈಯಾರ್ (ಪುನೀದವತಿ)–ಪೂತವತೀ, ಪುನೀತವತಿ; ಪುಗಳ್‌ಚೋಳ–ಕೀರ್ತಿಚೋಳ; ಪುಗಳ್ತುಣೈ–ಕೀರ್ತಿಮಿತ್ರ; ಕೋಟ್ಪುಲಿ–ವೀರಶಾರ್ದೂಲ; ಮಂಗೈಯರ್‌ಕ್ಕರಸಿ–

---

5 'ಶಿವರಹಸ್ಯ'ದ ರಚಕನ ಬಗ್ಗೆಯಾಗಲೀ. ರಚನೆಗೊಂಡ ಕಾಲದ ಬಗ್ಗೆಯಾಗಲೀ ಏನೂ ತಿಳಿದುಬರುವುದಿಲ್ಲ. ಅಗಸ್ತ್ಯ ಹಾಗೂ ಉಪಮನ್ಯುವಿನ 'ಭಕ್ತವಿಲಾಸ' ರಚನೆಗೊಂಡ ಮೇಲೆ ಅವನ್ನು ನೋಡಿ ಇದರ ಸೃಷ್ಟಿಯಾಗಿರಬೇಕು. ಈ ಸಂಸ್ಕೃತ ಕೃತಿಯನ್ನು 'ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ' ಮಾಲಿಕೆಯಲ್ಲಿ (ಸಂ. ೩೨) ಪ್ರಕಟಿಸಲಾಗಿದೆ.

6 ಪೆರಿಯಪುರಾಣಂ (ಮೊದಲ ಭಾಗ ಇಂಗ್ಲಿಷ್ ಭಾಷಾಂತರ) ೧೯೨೪, ಪೀಠಿಕೆ, ಪು. xviii

ಯರ್-ಮಹಿಳಾಕುಲನಾಯಿಕಾ—ಇತ್ಯಾದಿ. ಹರಿಹರನು ಸಂಸ್ಕೃತ ಕೃತಿಗಳಲ್ಲಿ ಬರುವ ಹೆಸರುಗಳನ್ನು ಬಳಸದೆ ಇರುವುದರಿಂದ ಅವನು ಸಂಸ್ಕೃತದ ಕಥೆಗಳನ್ನು ಎತ್ತಿಕೊಂಡಿಲ್ಲವೆಂದು ಹೇಳಬಹುದು.[7] ಈ ಸಂಸ್ಕೃತ ಗ್ರಂಥಗಳು ಪೆರಿಯಪುರಾಣ ಹುಟ್ಟಿ (೧೧೪೫) ಜನಪ್ರಿಯತೆಯನ್ನು ರಸಿಕ ವಿದ್ವಜ್ಜನರ ಮನ್ನಣೆಯನ್ನೂ ಪಡೆದ ಮೇಲೆ ಬಹುಶಃ ಹದಿನಾಲ್ಕನೆಯ ಶತಮಾನದಲ್ಲಿ ರಚಿಸಲ್ಪಟ್ಟುವೆಂದು ಹೇಳಬಹುದು. ಅದೇನೇ ಇರಲಿ, ಹರಿಹರನಿಂದ (ಕ್ರಿ. ಶ. ೧೨೦೦) ಈಚೆಗೆ ಹುಟ್ಟಿದುವು ಅವು. ಅವುಗಳಿಂದ ಈ ಕವಿ ಕಥಾವಸ್ತುವನ್ನು ಆಯ್ದುಕೊಳ್ಳುವ ಸಂಭವ ಇಲ್ಲವೇ ಇಲ್ಲ.[8]

ಉಪಮನ್ಯು ಭಕ್ತವಿಲಾಸ ಹಾಗೂ ಶಿವರಹಸ್ಯಗಳ ನಡುವೆ ಹೆಚ್ಚಿನ ಸಾಮ್ಯಗಳಿವೆ. ಎರಡರಲ್ಲೂ ಭಕ್ತರ ಹೆಸರು, ವೃತ್ತಿ, ವಾಸಸ್ಥಳಗಳ ವಿವರಗಳಲ್ಲಿ ಹೆಚ್ಚು ಹೊಂದಿಕೆ ಕಂಡುಬರುತ್ತದೆ.[9] ಉಪಮನ್ಯು ಭಕ್ತವಿಲಾಸವು ಉಪಮನ್ಯು ಮುನಿಯಿಂದ ಹೇಳಲಾಯಿತೆಂದು ಪ್ರಚಲಿತವಿದೆ. ಆದರೆ, ಶಿವರಹಸ್ಯಕ್ಕೆ ನಿರ್ದಿಷ್ಟ ಕರ್ತೃವೊಬ್ಬರಿಲ್ಲ. ಕರ್ತೃವಿನಂತೆ ಅದರ ರಚನಾ ಕಾಲವೂ ಸ್ಪಷ್ಟವಿಲ್ಲ. ಪಾರ್ವತಿಯಿಂದ ಪ್ರಶ್ನಿಸಲ್ಪಟ್ಟ ಮಹಾದೇವನು ಅವಳ ಸಂದೇಹಗಳಿಗೆಲ್ಲಾ ಸೂಕ್ತ ಪರಿಹಾರವನ್ನು ಶಿವರಹಸ್ಯದಲ್ಲಿ ನೀಡುವನು. ಇಲ್ಲಿ ದೇವಿಗೆ ಶಿವನು ಹೇಳಿದುದನ್ನು ಕೇಳಿಸಿಕೊಂಡ ಕುಮಾರ ಸ್ವಾಮಿಯು ಜೈಗೀಷವ್ಯನಿಗೆ ಅದನ್ನು ತಿಳಿಸಿದಂತೆ ನಿರೂಪಿಸಲಾಗಿದೆ. ಶಿವರಹಸ್ಯದ ಒಂಬತ್ತನೆಯ ಅಂಶದಲ್ಲಿ, ದೇವಿಯು ಪರಮೇಶ್ವರನನ್ನು ಕುರಿತು 'ಮುಂದೆ ಕಲಿಯುಗದಲ್ಲಿ ಅವತರಿಸುವ ಪ್ರಸಿದ್ಧರಾದ ಶಿವಪಾದಪೂಜಕರಾರು ? ಅವರ ಚರಿತ್ರೆಯನ್ನು ವಿಸ್ತಾರವಾಗಿ ನನಗೆ ತಿಳಿಸು' ಎಂದು ಪ್ರಾರ್ಥಿಸುವಳು. ಅವಳ ಕೋರಿಕೆಯನ್ನು ಮನ್ನಿಸಿ ಶಿವನು ತಮಿಳುನಾಡಿನ ಅರುವತ್ತುಮೂವರು ಭಕ್ತರ ಕಥೆಯನ್ನು ಅವರು ಹುಟ್ಟುವ ಮುನ್ನವೇ ತಿಳಿಯಪಡಿಸುವನು. ಶಿವರಹಸ್ಯದ ಪ್ರಕಾರ ಅರುವತ್ತುಮೂವರು ಭಕ್ತರಲ್ಲಿ ಮೊದಲನೆಯವನು ಮುನಿಶ್ರೇಷ್ಠನೂ ಮಹಾತೇಜಸ್ವಿಯೂ ಆದ ಉಪಮನ್ಯು ಮುನಿಯು.[10] ಇವನು ಇತರ ಭಕ್ತರಿಗೆಲ್ಲ ಶಿವಭಕ್ತಿ ಮಹಿಮೆಯನ್ನು ಉಪದೇಶಿಸುವನು. (ಈ ಕಾರಣದಿಂದಲೂ ಶಿವರಹಸ್ಯಕ್ಕೆ

---

7 ಪ್ರೊ॥ ಡಿ. ಎಲ್. ನರಸಿಂಹಾಚಾರ್, ಹಂಪೆಯ ಹರಿಹರ, ೧೯೬೮, ಪು. ೩೨

8 ಎಚ್. ದೇವೀರಪ್ಪ: ಶರಣ ಚರಿತ ಮಾನಸಂ, ೧೯೬೮, ಪೀಠಿಕೆ, ಪು cciv

9 ಉಪಮನ್ಯು ಭಕ್ತವಿಲಾಸವನ್ನು—ಅದು ದೊರೆಯದ ಕಾರಣ—ನೋಡಲಾಗಿಲ್ಲ. ಶಿವರಹಸ್ಯವನ್ನು ಸೂಕ್ಷ್ಮವಾಗಿ ನೋಡಲಾಗಿದೆ. ಇವೆರಡರ ನಡುವೆ ಹೆಚ್ಚು ಸಾಮ್ಯವಿದೆಯೆಂದು ಹೇಳುವಾಗ ನನ್ನ ಅಭಿಪ್ರಾಯವು ಎಚ್. ದೇವೀರಪ್ಪನವರು ಸಂಪಾದಿಸಿರುವ 'ಶರಣ ಚರಿತ ಮಾನಸಂ'ನ ಅನುಬಂಧ ೩ರಲ್ಲಿ ಬಂದಿರುವ 'ಅರುವತ್ತು ಮೂವರ ಹೆಸರು, ಕಾಯಕ, ಕುಲ, ಸ್ಥಳಗಳ ವಿವರಗಳನ್ನು ಆಧರಿಸಿದೆ.

10 ನೋಡಿ: ಶಿವರಹಸ್ಯ ಅಂಶ ೯ ಅ. ೧೮ ಶ್ಲೋಕ ೭–೮

ಉಪಮನ್ಯು ಭಕ್ತವಿಲಾಸ ಮೂಲ ಆಕರವಾಗಿರಬಹುದೆಂದು ಊಹಿಸಬಹುದು.) ಶಿವರಹಸ್ಯದಲ್ಲಿ ಬಂದಿರುವ ಅರುವತ್ತುಮೂವರು ಭಕ್ತರ ಪ್ರಸ್ತಾಪ ಈ ರೀತಿಯಿದೆ:

| | ಭಕ್ತನ ಹೆಸರು | ವೃತ್ತಿ/ಕುಲ | ಸ್ಥಳ |
|---|---|---|---|
| ೧. | ಸುಂದರ (ಸುಂದರೇಶ್ವರ, ಸೌಮ್ಯ) | ಆದಿಶೈವ | ಕಮಲಾಲಯ ಕ್ಷೇತ್ರ |
| ೨. | ತಿರುನೀಲಕಂಠ ಕುಶವ | ಕುಂಬಾರ | ಪುಂಡರೀಕಪುರ |
| ೩. | ಸ್ವಭಾವರಿಪು | ವೈಶ್ಯ | ಕವೇರಪುಷ್ಪಪುರಿ |
| ೪. | ಇಲಾನಂದ | ಶೂದ್ರ | ಕನಿಷ್ಠ ಕುಟಿ |
| ೫. | ಚೇದಿಪತಿ (ಮರಾಧನಾಥ, ಸತ್ಯಾರ್ಥನಾಥ) | ಕ್ಷತ್ರಿಯ | ಗೋಪಾಲಪುರ |
| ೬. | ವೀರೋದ್ಭಟ (ಹಾರಭಟ) | ರುದ್ರವಂಶ ಚೂಡಾಮಣಿ | ಅರುಣಾದ್ರಿ |
| ೭. | ಅಮರನೀತಿ | ವೈಶ್ಯ | ಶಂಭುಪುರ |
| ೮. | ವೀರಭಕ್ತನಾಥ | ಶೈವಬ್ರಾಹ್ಮಣ | ಗರ್ಭಪುರ |
| ೯. | ಏನಾದಿನಾಥ | ಶಸ್ತ್ರವಿದ್ಯಾಗುರು | ಶಿಬಿರಗ್ರಾಮ |
| ೧೦. | ಕಿರಾತಭಕ್ತ (ನೀಲ) | ಬೇಡ (ಭಿಲ್ಲ) | ಗೋಧಾಪುರ |
| ೧೧. | ಕಲಾನಾಥ | ವೈಶ್ಯ | ಘಟಗ್ರಾಮ |
| ೧೨. | ಮಾನಕಂಜನದೀ | ಶೂದ್ರ, ಸೈನ್ಯಾಧಿಪತಿ | ಕಂಜನದೀಪುರ |
| ೧೩. | ಶಂಕುಲಾದಾಯ | ಶೂದ್ರ | ಕಣಮಂಗಳ |
| ೧೪. | ಗೋನಾಥ | ಗೊಲ್ಲ | ಮಂಗಳ |
| ೧೫. | ಮೂರ್ತಿನಾಥ | ವರ್ತಕ | ಮಧುರಾಪಟ್ಟಣ |
| ೧೬. | ಸ್ಕಂದನಾಥ | ಬ್ರಾಹ್ಮಣ | ಶರಣ್ಯಗ್ರಾಮ |

| ಭಕ್ತನ ಹೆಸರು | ವೃತ್ತಿ/ಕುಲ | ಸ್ಥಳ |
|---|---|---|
| ೧೭. ಪಶುಪತಿ | ಬ್ರಾಹ್ಮಣ | ಶ್ರೀಮುಖ |
| ೧೮. ಶ್ವೋೕಗಂತು (ನಂದ) | ಅಂತ್ಯಜ, ಚಮ್ಮಾರ | ಊರ್ಧ್ವಾರ್ವಂಘ್ರಿ (ಕಂಜನಗರ) |
| ೧೯. ವಿಚಾರಭಕ್ತ | ಅಗಸ | ಕಾಂಚೀಪುರ |
| ೨೦. ಚಂಡೀಶ | — | — |
| ೨೧. ವಾಗೀಶ | ಶೂದ್ರ | ಆಮೂರ |
| ೨೨. ಕುಲಪಕ್ಷ | ಶಿವಭಕ್ತ | ಸೌರಭೋತ್ತರಕುಂಡ |
| ೨೩. ಶೂರಶರ್ಮ (ಶೂರಸೇನ) | ಬ್ರಾಹ್ಮಣ | ಮಿಥಿಲಾಪಟ್ಟಣ |
| ೨೪. ಬೋಧಸಂಬಂಧನಾಥ | ಶೈವಬ್ರಾಹ್ಮಣ | ಬ್ರಹ್ಮಪುರಿ |
| ೨೫. ಜ್ಞಾನಸಂಬಂಧನಾಥ | ,, | ,, |
| ೨೬. ಪೂತವತೀ | ವೈಶ್ಯ | ಮಿಥಿಲಾ |
| ೨೭. ತದ್ಭೂತಿ | ಬ್ರಾಹ್ಮಣೋತ್ತಮ | ಶಶಾಂಕಪುರ |
| ೨೮. ನೀಲಲಗ್ನ | ,, | ಶಾಸ್ತ್ರಮಂಗಳ |
| ೨೯. ನಮಿನಂತಿ | ಶಿವಭಕ್ತ | ಹೇಮಲಾಭ |
| ೩೦. ಕಲಿಕಾಮ | ಶೂದ್ರ | ಶ್ರೀಮಹಾಮಂಗಳ |
| ೩೧. ಮೂಲದೇವ | ಗಣಮುಖ್ಯ | ಶಾಸ್ತ್ರಗ್ರಾಮ |
| ೩೨. ಉದ್ದಂಡದಂಡ (ದಂಡೀಭಕ್ತ) | ಭಕ್ತ | ಕಮಲಾಲಯಕ್ಷೇತ್ರ |
| ೩೩. ಮೂರ್ಖಕ | ಭಕ್ತಾರ್ಚಕ | ಶಕ್ತ್ಯಾರಣ್ಯ |
| ೩೪. ಸೋಮಯಾಜಿಮಾರ | ಬ್ರಾಹ್ಮಣ | — |

| | | | |
|---|---|---|---|
| ೩೫. | ಶಾಕ್ಯನಾಥ | ಜೈನ | ಶ್ರೀಸಂಗಮ |
| ೩೬. | ದಭ್ರಭಕ್ತ | ಬ್ರಾಹ್ಮಣ | ಅರುಣಾರುಣ್ಯ |
| ೩೭. | ಮಹಾಗೋದ | ಕ್ಷತ್ರಿಯ | ಮಹೋದಯ |
| ೩೮. | — | ಶಿವಭಕ್ತ | ದ್ರೋಣೀಪುರ |
| ೩೯. | ಕೃತಾಂತಕ | ಕ್ಷತ್ರಿಯ | ಕಲಿಂದಾಪಟ್ಟಣ |
| ೪೦. | ಕೀರ್ತಿಚೋಲರಾಜ | ,, | ಶ್ರೀನಿವಾಸಪುರ |
| ೪೧. | ನರಸಿಂಹ | ,, | ಉಗ್ರಸ್ಥಾನ |
| ೪೨. | ಅತಿಭಕ್ತ | ಬೆಸ್ತ | ಅತಿಮುಕ್ತಕ್ಷೇತ್ರ |
| ೪೩. | ಕಲಿಕಂದ | ವೈಶ್ಯ | ಪೇಣಾಕಟಾಪುರ |
| ೪೪. | ಕಲಿನೀತಿ | ತೈಲವ್ಯಾಪಾರಿ | ಆಧಿಕಾಪುರ |
| ೪೫. | ಶಕ್ತಿನಾಥ | ಶೂದ್ರ | ವಿರಿಂಚಿಪುರ |
| ೪೬. | ಕಾಲುವ ಪಲ್ಲಿನಾಥ | ಭಿಲ್ಲರಾಜರ ವಂಶಸ್ಥ | ವಿರಿಂಚಿಪುರ |
| ೪೭. | — (ದೀಪದಕಲಿ) | ಶೈವಬ್ರಾಹ್ಮಣ | ಶ್ವೇತನದಿಯ ದಕ್ಷಿಣದಡ |
| ೪೮. | ಕಾರಿನಾಥ | ಕವೀಶ್ವರ | ಕಂದಪುರ |
| ೪೯. | ದೀರ್ಘಮಾರ (ವಾಗ್ಮಿ) | ಕ್ಷತ್ರಿಯ | ಮಧುರ |
| ೫೦. | ನಾಸೀರಭಂಜನ | ಶೂದ್ರ | ದೀರ್ಘಪುರ |
| ೫೧. | ಪಾದಸಿಂಹ | ಕ್ಷತ್ರಿಯ | — |
| ೫೨. | ಸಂಕರ್ಷಿ | ,, | — |
| ೫೩. | ಕೀರ್ತಿಮಿತ್ರ | ಶೈವಬ್ರಾಹ್ಮಣ | — |
| ೫೪. | ವೀರಶಾರ್ದೂಲ | ಶೂದ್ರ | ನಾಮಪುರ |

ಶಿವರಹಸ್ಯದಲ್ಲಿ ಎಲ್ಲ ಅರುವತ್ತುಮೂವರು ಪುರಾತನ ಭಕ್ತರ ಕಥೆಯನ್ನು ಹೇಳಲಾಗಿಲ್ಲ. ಅರುವತ್ತುಮೂವರು ಭಕ್ತರಲ್ಲಿ ಮೊದಲನೆಯವನು ಉಪಮನ್ಯು ಮುನಿ ಎಂದು ಹೇಳಲಾಗಿದ್ದರೂ ಅವನ ಕಥೆ ಇಲ್ಲಿ ಬಂದಿಲ್ಲ. ಸುಂದರನ ಕಥೆಯಿಂದ ಅರುವತ್ತು ಮೂವರು ಭಕ್ತರ ಕಥಾಮಾಲಿಕೆ ಪ್ರಾರಂಭವಾಗುತ್ತದೆ. ಪೆರಿಯ ಪುರಾಣಂನಲ್ಲಿ ಬರುವ ಚಿಱುಪ್ಪುಲಿ, ಸೆರುತ್ತುಣೈ, ಪೂಸಲಾರ್, ಮಂಗೈಯರ್ ಕ್ಕರಸಿಯಾರ್, ನೇಶನಾಯನಾರ್, ಕೋಚ್ಚೆಂಗಟ್‌ಚೋಳ, ತಿರುನೀಲಕಂಠ ಯಾಳ್ಪಾಣರು, ಚಡೈಯನಾಯನಾರ್-ಇಸೈಜ್ಞಾನಿಯರ್—ಈ ಭಕ್ತರ ಕಥೆಗಳು ಶಿವರಹಸ್ಯದಲ್ಲಿ ಬಂದಿಲ್ಲ, ಆದರೆ ಉಪಮನ್ಯು ಭಕ್ತವಿಲಾಸದಲ್ಲಿ ಬಂದಿವೆ. ಶಿವ ರಹಸ್ಯದಲ್ಲಿ ಈ ಭಕ್ತರ ಚರಿತ್ರೆ ಬಿಟ್ಟುಹೋಗಿರುವುದಕ್ಕೆ ಕಾರಣವೇನೆಂಬು ದ ತಿಳಿಯದು.

ಶಿವರಹಸ್ಯದಲ್ಲಿ ನಂಬಿಯಣ್ಣನ ಕಥೆ ಸಮಗ್ರವಾಗಿ ಒಂದೇ ಕಡೆ ಸಿಗುವುದಿಲ್ಲ. ಮೊದಲ ಕಥೆಯಾದ ಸುಂದರನ ಕಥೆಯಲ್ಲಿ ಸುಂದರ-ಸಾಗರಿಕೆಯರ ಪ್ರಣಯ ಕಥೆ ವಿಸ್ತಾರವಾಗಿ ಬಂದಿದೆ. ಸುಂದರನ ಕಥೆ ಬೇರೆ ಭಕ್ತರ ಚರಿತ್ರೆಯಲ್ಲೂ ಬರುತ್ತವೆ. ಉದಾಹರಣೆಗೆ ವೀರೋದ್ಭಟ, ಕಲಿಕಾಮ, ಸೋಮಯಾಜಿಮಾರ, ಮಹಾಗೋಡ (ಪೆರಿಯ ಪುರಾಣಂ: ಚೇರಮಾನ್ ಪೆರುಮಾಳ್). ಸಂಸ್ಕೃತ ಹಾಗೂ ತಮಿಳು ಕೃತಿಗಳಲ್ಲಿ ಬರುವ ಈ ಭಕ್ತರ ಕಥೆಯಲ್ಲಿ ಸಾಕಷ್ಟು ವ್ಯತ್ಯಾಸಗಳಿರುವುದು ತೌಲನಿಕ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಪೆರಿಯಪುರಾಣಂನ ತಿರುಮಲೈಚಿರುಪ್ಪುವಿನಲ್ಲಿ ಉಪಮನ್ಯು ಮುನಿಗಳು ತಮ್ಮ ಶಿಷ್ಯರಿಗೆ ಆಲಾಲಸುಂದರನು ಕೈಲಾಸದಿಂದ ಮರ್ತ್ಯಲೋಕಕ್ಕೆ ಅವತರಿಸಿದ ಕಥೆ ಹೇಳುವರು. ಈ ಕಥೆ ಶಿವರಹಸ್ಯದಲ್ಲೂ ಬಂದಿದೆ. ವ್ಯತ್ಯಾಸವೆಂದರೆ, ಪೆರಿಯಪುರಾಣಂನಲ್ಲಿ ಆಲಾಲಸುಂದರನು ಕೈಲಾಸದಲ್ಲಿ ಪಾರ್ವತಿಯ ಶಿರಿಮುಡಿಗೆ ಹೂತರುವ ಅನಿಂದಿತೆ ಹಾಗೂ ಕಮಲಿನಿಯರನ್ನು ನೋಡಿ ಮೋಹಗೊಳ್ಳುವನು. ಅವರೂ ಇವನನ್ನು ಆಸೆಯಿಂದ ನೋಡುವರು. (ಕಾಮವಶರಾಗಿ ಅವರು ಕಾಮಕೇಳಿ ಎಸಗುವುದಿಲ್ಲ.) ಶಿವರಹಸ್ಯದಲ್ಲಿ ಸುಂದರನು ಪಾರ್ವತಿಯ ಸಖಿಯಾದ ಕಮಲಿನಿ ಯನ್ನು (ಮಾತ್ರ) ನೋಡಿ ಮೋಹಿತನಾಗುವನು. ಕಮಲಿನಿಯೂ ಸುಂದರನನ್ನು ನೋಡಿ ಅತ್ಯಾನಂದ ಹೊಂದುವಳು. ಕಾಮಪರವಶರಾಗಿ ಅವರಿಬ್ಬರೂ ಕಾಮಕೇಳಿ ಗಳಿಂದ ಸಂತೋಷಪಡೆಯಲು ಆ ಕಾಡಿನ ಮಧ್ಯದಲ್ಲಿರುವ ಲತಾವನದ ವಡದಲ್ಲಿ ಸ್ವೇಚ್ಛೆಯಾಗಿ ಕೆಲಕಾಲ ವಿಹರಿಸಿ ನಂತರ ತಮ್ಮ ಕರ್ತವ್ಯ ನಿರ್ವಹಿಸಲು ನಡೆಯು ವರು. ಸುಂದರನು ವಿಶೇಷ ಕಾಮಾಸಕ್ತಿಯನ್ನು ತೋರ್ಪಡಿಸಿದ್ದರಿಂದ ಶಿವನು ಅವ ನನ್ನು ಭೂಲೋಕದಲ್ಲಿ ಮಾನವನಾಗಿ ಹುಟ್ಟಿ ವಿಷಯಭೋಗ ಪರಂಪರೆಯನ್ನು ಅನು ಭವಿಸಿ, ಪಾರ್ವತಿಯ ಸಖಿಯಾದ ಕಮಲಿನಿಯೊಡನೆ ವಿವಾಹವಾಗಿ ಕಾವೇರಿನದಿಯ

ಎರಡೂ ದಡಗಳಲ್ಲಿರುವ ಶಿವಕ್ಷೇತ್ರಗಳನ್ನೆಲ್ಲಾ ಅವಳೊಡನೆ ಸುತ್ತಿ ಪೂಜಿಸಿ ಸ್ತೋತ್ರಮಾಡಿ ಮತ್ತೆ ಕೈಲಾಸಕ್ಕೆ ಬರುವಂತೆ ಶಾಪವೀಯುವನು. (ಶಿವರಹಸ್ಯ ದಲ್ಲಿ ಬೇರೆಲ್ಲೂ ಸುಂದರನ ಇನ್ನೊಬ್ಬ ಪ್ರೇಯಸಿ (ಸಂಕಿಲಿ)ಯ ಪ್ರಸ್ತಾಪ ಬರುವುದಿಲ್ಲ.) ಪೆ. ಪು. ದಲ್ಲಿ ಆಲಾಲಸುಂದರನು ಶಿವನ ಆದೇಶದಂತೆ ತಿರುನಾವಲೂರಿನ ಆದಿಶೈವ ಬ್ರಾಹ್ಮಣರಾದ ಶಡೆಯನಾರ್ ಇಶೈಜ್ಞಾನಿ ದಂಪತಿಗಳ ಮಗನಾಗಿ ನಂಬಿಯಾರೂರನೆಂಬ ಹೆಸರಿನಿಂದ ಹುಟ್ಟುವನು. ಶಿವರಹಸ್ಯದಲ್ಲಿ ಸುಂದರನು ಕಾವೇರಿ ನದಿಯ ದಡದಲ್ಲಿನ ಶಿವಕ್ಷೇತ್ರದಲ್ಲಿ ವಾಸಮಾಡುತ್ತಿರುವ ಶೈವಧರ್ಮೀಯರಿಗೆ ಮಗನಾಗಿ ಹುಟ್ಟಿದನೆಂದು ಹೇಳಲಾಗಿದೆ. (ತಂದೆ–ತಾಯಿಯರ ಹೆಸರಿನ ಉಲ್ಲೇಖವಿಲ್ಲ.) ಪೆ. ಪು ದಲ್ಲಿ ನಂಬಿಯಾರೂರನನ್ನು ಮಕ್ಕಳಿಲ್ಲದ ಆ ನಾಡಿನ ದೊರೆ ನರಸಿಂಗಮೊನೆಯರು ಸಾಕಿದರೆಂದು ಹೇಳಲಾಗಿದೆ. ಶಿವರಹಸ್ಯದಲ್ಲಿ ಇದರ ಪ್ರಸ್ತಾಪವಿಲ್ಲ. ಪೆ. ಪು ದಲ್ಲಿ ತನ್ನ ವಯಸ್ಕ ಪುತ್ರನಿಗೆ ವಿವಾಹ ಮಾಡಲು ಶಡೆಯನಾರ್ ತೀರ್ಮಾನಿಸಿ ಹೆಣ್ಣು ಕೇಳಲು ಪುತ್ತೂರಿನ ಶಡಂಕವಿ ಶಿವಾಚಾರ್ಯನಲ್ಲಿಗೆ ವಿಪ್ರರನ್ನು ಕಳುಹಿಸುವನು. ಶಿವರಹಸ್ಯದಲ್ಲಿ ಸುಂದರನ ತಂದೆಯು ಒಡವೆ ವಸ್ತುಗಳನ್ನು ತೆಗೆದುಕೊಂಡು ಬಂಧುಗಳೊಡನೆ ಕನ್ಯಾರತ್ನದ ಶೋಧನೆಗೆ ಹೊರಡುವನು. ಪೆ. ಪು ದಲ್ಲಿ ನಿಶ್ಚಯವಾಗಿದ್ದ ವಿವಾಹವನ್ನು ತಪ್ಪಿಸಲು ಶಿವ ವೃದ್ಧಬ್ರಾಹ್ಮಣನ ವೇಷಧರಿಸಿ ಬರುವನು. ನಂಬಿಯಾರೂರನು ತನ್ನ ತೊತ್ತೆಂಬುದನ್ನು ಪತ್ರವೊಂದರ ಮೂಲಕ ಸಾಧಿಸಲು ಶಿವ ಪ್ರಯತ್ನಿಸುವನು. ನಂಬಿಯಾರೂರನು ಬ್ರಾಹ್ಮಣನು ತೋರಿಸಿದ ಅಡಿಮೆಯೋಲೆಯನ್ನು ಹರಿದುಹಾಕುವನು. ತಿರುವಣ್ಣೈನಲ್ಲೂರಿನಲ್ಲಿ ಮೂಲಪತ್ರವಿದೆಯೆಂದೂ ಅಲ್ಲಿಗೆ ಬಂದರೆ ತನ್ನ ಮಾತನ್ನು ಪ್ರಮಾಣಿಸುವುದಾಗಿ ಬ್ರಾಹ್ಮಣನು ಹೇಳಲು ನಂಬಿಯಾರೂರನು ಅದಕ್ಕೊಪ್ಪಿ ಅಲ್ಲಿಗೆ ವೃದ್ಧಬ್ರಾಹ್ಮಣನೊಡನೆ ಹೋಗುವನು. ಅಲ್ಲಿಯ ಹಿರಿಯ ಬ್ರಾಹ್ಮಣರ ಸಭೆಯಲ್ಲಿ ವೃದ್ಧನು ತನ್ನ ದೂರನ್ನು ಮಂಡಿಸುವನು. ಮೂಲಪತ್ರವನ್ನು ತಂದು ತೋರಿಸಿ ಸಭೆಯವರು ಅದನ್ನೋದಿ ಸತ್ಯಾಂಶವನ್ನು ಮನಗಂಡು ನಂಬಿಯಾರೂರನಿಗೆ 'ಈ ವೃದ್ಧಬ್ರಾಹ್ಮಣನು ಹೇಳಿದಂತೆ ಅವರ ಸೇವೆ ಮಾಡುವುದೇ ನಿನ್ನ ಕರ್ತವ್ಯವು' ಎಂದು ಹೇಳಿ ನ್ಯಾಯ ತೀರ್ಮಾನಿಸುವರು. ತಿರುವಣ್ಣೈನಲ್ಲೂರಿನಲ್ಲಿ ಪರಂಪರೆಯಾಗಿ ಬಂದ ಮನೆ, ಭೂಮಿ ಇವೇ ಮೊದಲಾದುವನ್ನು ತೋರಿಸಿರಿ ಎಂದು ಸಭೆಯವರು ವೃದ್ಧಬ್ರಾಹ್ಮಣನನ್ನು ಕೇಳಲು, ಎಲ್ಲರನ್ನೂ ಹುಸಿವೇಷದ ಶಿವನು ಆ ಊರಿನ ದೇವಾಲಯದೊಳಗೆ ಕರೆದೊಯ್ದು ಅದೃಶ್ಯನಾಗುವನು. ನಂಬಿಯಾರೂರನು ಅಚ್ಚರಿಯಿಂದ ಬ್ರಾಹ್ಮಣನನ್ನು ಕೂಗಿ ಕರೆಯಲು ಶಿವ ಪಾರ್ವತಿಯೊಡನೆ ಪ್ರತ್ಯಕ್ಷನಾಗುವನು. ನಂಬಿಯಾರೂರನನ್ನು ಶಿವನು ಆಳ್ಗೊಂಡ ಪ್ರಸಂಗ ಪೆ. ಪು ದಲ್ಲಿ ತುಸು ನಾಟಕೀಯವಾಗಿ ಬರುತ್ತದೆ.

ಶಿವರಹಸ್ಯದಲ್ಲಿ ಸುಂದರನನ್ನು ತೊತ್ತುಗೊಳ್ಳಲು ಶಿವ ವೃದ್ಧ ಬ್ರಾಹ್ಮಣನ ವೇಷತೊಟ್ಟು ಕೈಯಲ್ಲಿ ಕಾಗದವೊಂದನ್ನು ಹಿಡಿದುಕೊಂಡು ಬಂದು, ಸುಂದರನಿಗೆ ಹೆಣ್ಣು ಕೊಡಲು ಬಂದಿದ್ದ ಬಂಧುಗಳಿಗೆ ಆ ಕಾಗದವನ್ನು ಕೊಡುವನು. ಪತ್ರವನ್ನು ಓದಿದ ತಂದೆತಾಯಿಗಳೂ ಬಂಧುಗಳೂ ಸುಂದರನಿಗೆ ಬ್ರಾಹ್ಮಣನನ್ನು ಹಿಂಬಾಲಿಸಿ ಅವನು ಹೇಳಿದಂತೆ ನಡೆಯಲು ತಿಳಿಸುವರು. ಸುಂದರನು ಬ್ರಾಹ್ಮಣನ ಹಿಂದೆ ಹೊರಡುವನು. ಆಗ ಬಂಧುಗಳೂ ತಂದೆತಾಯಿಯರೂ ದುಃಖದಿಂದ ಆ ಘಟನೆ ಯನ್ನು ನೆನೆಯುತ್ತಾ ಮನೆಗೆ ಹಿಂತಿರುಗುವರು. ವೃದ್ಧ ಬ್ರಾಹ್ಮಣನು ಶಿವ ದೇವಾಲಯವನ್ನು ಪ್ರವೇಶಿಸಿ ಅಲ್ಲಿದ್ದ ಶಿವಲಿಂಗದಲ್ಲಿ ಐಕ್ಯವಾಗಿ ಹೋಗುವನು. ಅದನ್ನು ನೋಡಿದ ಸುಂದರನು ಅಚ್ಚರಿಗೊಂಡು ಶಿವನನ್ನು ಸ್ತುತಿಸುವನು. ಶಿವ ಅವನ ಸ್ತೋತ್ರಕ್ಕೆ ಮೆಚ್ಚಿ ಪ್ರತ್ಯಕ್ಷನಾಗುವನು. ಶಿವ ಸುಂದರನನ್ನು ತೊತ್ತು ಗೊಳ್ಳುವ ಪ್ರಸಂಗ ಇಲ್ಲಿ ತೀರಾ ಸಪ್ಪೆಯಾಗಿ ಬರುತ್ತದೆ. ಯಾವ ನಾಟಕೀಯ ಸನ್ನಿವೇಶವೂ ಇಲ್ಲಿ ಬರುವುದಿಲ್ಲ.

ಪೆ. ಪು ದಲ್ಲಿ ಉಮೆಯ ಸೇವಕಿಯಾಗಿದ್ದ ಕಮಲಿನಿಯು ತಿರುವಾರೂರಿನ ದೇವದಾಸಿಯರ ಕುಲದಲ್ಲಿ ಪರವೈಯಾರ್ ಆಗಿ ಹುಟ್ಟುವಳು. (ಇಲ್ಲಿ ತಂದೆ-ತಾಯಿಯರ ಹೆಸರಿಲ್ಲ.) ಶಿವರಹಸ್ಯದಲ್ಲಿ ಪಾರ್ವತಿಯ ಪರಿಚಾರಿಕೆಯಾಗಿದ್ದ ಕಮಲಿನಿಯು ಕಮಲಾಲಯಕ್ಕೆ ಪೂರ್ವದಿಕ್ಕಿನಲ್ಲಿರುವ ಒಂದು ಪಟ್ಟಣದಲ್ಲಿ (?) ಶೃಂಗಾರನಾಯಿಕೆ ಎಂಬ ಪ್ರಸಿದ್ಧ ಚಂದ್ರಗಣಿಕೆಯ ಮಗಳಾಗಿ ಜನಿಸುವಳು. ಶೃಂಗಾರನಾಯಿಕೆಯು ಪುತ್ರೀರತ್ನವನ್ನು ಪಡೆಯಬೇಕೆಂದು ವಲ್ಮೀಕರಂಧ್ರೇಶನನ್ನು ಪೂಜಿಸಿದಳು; ಅನೇಕ ಶೈವಶ್ರೇಷ್ಠರನ್ನು ಸತ್ಕರಿಸಿದಳು; ಪಾರ್ವತಿಯ ಪ್ರೀತಿ ಗೋಸ್ಕರ ಅರಿಸಿನ, ಕುಂಕುಮ, ಬಟ್ಟೆಬರೆಗಳೇ ಮೊದಲಾದವುಗಳಿಂದ ಕನ್ಯೆಯರನ್ನು ಪೂಜೆಮಾಡಿದಳು; ರೇಷ್ಮೆಯ ಬಟ್ಟೆ, ಹಾರ, ಕುಂಕುಮ ಹಾಗೂ ಒಡವೆಗಳಿಂದ ಗೌರೀದೇವಿಯನ್ನು ಪೂಜಿಸಿದಳು. ಹೀಗೆ ಅನೇಕ ವೇಳೆ ಮಾಡಿದಮೇಲೆ ಸಂತುಷ್ಟ ರಾದ ಪಾರ್ವತೀಪರಮೇಶ್ವರರು ಇವಳಿಗೆ ಸತ್ಪುತ್ರಿಯು ಜನಿಸಲೆಂದು ವರವನ್ನು ಅನುಗ್ರಹಿಸಿದರು. ಶೃಂಗಾರನಾಯಿಕೆಯು ಶಿವ ಹಾಗೂ ಉಮೆಯರ ಅನುಗ್ರಹದಿಂದ ಜನಿಸಿದ ಮಗಳಿಗೆ ಸಾಗರಿಕಾ ಎಂದು ಹೆಸರಿಟ್ಟಳು. ನಂಬಿಯಾರೂರ ಹಾಗೂ ಪರವೆಯರು ಪರಸ್ಪರ ಸಂಧಿಸಿ ಪ್ರಣಯೋನ್ಮಾದಕ್ಕೆ ಒಳಗಾದ ಚಿತ್ರ ಹಾಗೂ ಪೆ. ಪು ಹಾಗೂ ಶಿವರಹಸ್ಯಗಳಲ್ಲಿ ಸ್ವಲ್ಪ ಹೋಲಿಕೆ ಪಡೆಯುತ್ತದೆ. ಪೆ. ಪು ದಲ್ಲಿ ನಂಬಿ-ಪರವೆ ಯರ ವಿವಾಹವನ್ನು ನೆರವೇರಿಸಲು ತಿರುವಾರೂರಿನ ಶಿವ ಅಲ್ಲಿನ ಪೂಜಾರಿಗಳಿಗೆ ಕನಸಿನಲ್ಲಿ ಬಂದು ತಿಳಿಸುವನು. ಶಿವರಹಸ್ಯದಲ್ಲಿ ಸುಂದರನಿಗೆ ಸಾಗರಿಕೆಯನ್ನು ಕೊಟ್ಟು ವಿವಾಹ ಮಾಡಬೇಕೆಂದು ಆ ಪಟ್ಟಣದ ಜನಗಳಿಗೆ ಕನಸಿನಲ್ಲಿ ಶಿವ ಕಾಣಿಸಿ ಕೊಂಡು ಆದೇಶ ನೀಡುವನು. (ವಿರಹಾವಸ್ಥೆಯಲ್ಲಿ ಬಳಲಿದ್ದ ಸುಂದರೇಶ ಸಾಗರಿಕೆ ಯರಿಗೂ ಶಿವ ಕನಸಿನಲ್ಲಿ ದರ್ಶನವಿತ್ತು 'ನಿಮ್ಮಿಬ್ಬರಿಗೂ ವಿವಾಹವಾಗಲಿ' ಎಂದು

ಹೇಳುವನು.) ವಿವಾಹಾನಂತರ ಪೆ. ಪು ದಲ್ಲಿ ನಂಬಿಯಾರೂರನು ತ್ಯಾಗೇಶರ ದೇವಾಲಯಕ್ಕೆ ಬರುವನು. ಅಲ್ಲಿಯ ಶ್ರೀದ್ವಾರದ ಮುಂದಿರುವ ದೇವಾಶಿರಿಯನ್ ಮಂಟಪದ ಬಾಗಿಲೆದುರು ನಿಂತು ಅಲ್ಲಿ ನೆರೆದಿದ್ದ ಭಕ್ತರನ್ನು ನೋಡಿ ಇವರುಗಳಿಗೆಲ್ಲಾ ನಾನು ಸೇವಕನಾಗುವ ದಿವಸ ಎಂದು ಪ್ರಾಪ್ತವಾಗುತ್ತದೆಯೋ ಎಂದು ಮನದಲ್ಲಿ ಭಾವಿಸಿ ಪರಮೇಶ್ವರನನ್ನು ಭಕ್ತರನ್ನು ಸ್ತುತಿಸುವ ಯೋಗ್ಯತೆಯನ್ನು ದಯಪಾಲಿಸೆಂದು ಪ್ರಾರ್ಥಿಸುವನು. 'ತಿಲ್ಲೆಯಲ್ಲಿರುವ ಬ್ರಾಹ್ಮಣರ ಸೇವಕರ ಸೇವಕನಾಗಿರುವೆನು' ಎಂದು ಆರಂಭಿಸಿ, ಅಳವಿಲ್ಲದ ಕೀರ್ತಿಯಿಂದ ಕೂಡಿರುವ ಈ ಭಕ್ತರನ್ನು ಹೆಸರಿಸಿ ಸ್ತೋತ್ರಮಾಲೆಯನ್ನು ಹಾಡು ಎಂದು ಶಿವನು ನಂಬಿಯಾರೂರನಿಗೆ ಅನುಗ್ರಹಿಸುವನು. ಶಿವನು ಎತ್ತಿಕೊಟ್ಟ ವಾಕ್ಯವನ್ನೇ ಮೊದಲಾಗಿಟ್ಟು ಶಿವನ ಭಕ್ತರನ್ನು ನಂಬಿಯಾರೂರನು ಸ್ತುತಿಸುವನು. ಈ ಭಾಗವು ಶಿವರಹಸ್ಯದಲ್ಲಿ ಪೆರಿಯಪುರಾಣವನ್ನು ಹೆಚ್ಚು ಅನುಸರಿಸಿಕೊಂಡು ಬಂದಂತೆ ತೋರುತ್ತದೆ. ಪೆರಿಯಪುರಾಣದಲ್ಲಿ 'ತಿರುತ್ತೊಂಡತ್ತೊಗೈ'ಯನ್ನು ನಂಬಿ ಹಾಡುವಲ್ಲಿಗೆ ಸುಂದರನ ಕಥೆ ಒಂದು ಘಟ್ಟದಲ್ಲಿ ಮುಕ್ತಾಯಹೊಂದುತ್ತದೆ. ಇದೇ ಕ್ರಮವನ್ನು ಶಿವರಹಸ್ಯದಲ್ಲೂ ಕಾಣುತ್ತೇವೆ. ಪೆ. ಪು ದಲ್ಲಿ ಇಲ್ಲಿಂದ ಮುಂದೆ ನಂಬಿಯ ಕಥೆ ಬೇರೆ ಭಕ್ತರ ಕಥೆಗಳಲ್ಲಿ ಸೇರಿಕೊಂಡು ಬರುತ್ತದೆ. ಹೀಗೆ ಬೇರೆ ಭಕ್ತರ ಕಥೆಗಳಲ್ಲಿ ಚದುರಿಹೋಗಿರುವ ನಂಬಿಯಣ್ಣನ ಬದುಕಿನ ಎಳೆಗಳನ್ನು ಕೂಡಿಸಿಕೊಂಡರೆ ಮತ್ತೆ ನಂಬಿಯ ಜೀವಿತದ ಕೊನೆಯ ಘಟ್ಟವನ್ನು 'ವೆಳ್ಳಾನೈ ಚರುಕ್ಕಮ್' ಎಂಬ ಪೆ. ಪು ದ ಅಂತ್ಯಭಾಗದಲ್ಲಿ ನಾವು ತಿಳಿಯಬಹುದು. ಶಿವರಹಸ್ಯದಲ್ಲೂ ಸುಂದರೇಶನ ಬದುಕಿನ ಉಳಿದ ಭಾಗವನ್ನು ಇತರ ಭಕ್ತರ ಕಥೆಗಳಿಂದ ನಾವು ಸಂಗ್ರಹಿಸಿಕೊಳ್ಳಬೇಕಾದ ಅನಿವಾರ್ಯ ಸಂದರ್ಭ ಬರುತ್ತದೆ.

ಪೆ. ಪು ದಲ್ಲಿ ವಿಱನ್‌ಮಿಂಡ ನಾಯನಾರನ ಕಥೆಯಲ್ಲಿ ನಂಬಿಯ ಬದುಕಿಗೆ ಸಂಬಂಧಿಸಿದ ಕೆಲವು ವಿವರಗಳು ಸಿಗುತ್ತವೆ. ಅಲ್ಲಿ ಬಂದಿರುವಂತೆ ತಿರುಚ್ಚೆಂಗುನ್ರೂರಿನ ವೆಲ್ಲಾಳಕುಲದ ವಿಱನ್‌ಮಿಂಡನು ಶಿವಸ್ಥಾನಗಳನ್ನೆಲ್ಲಾ ಸಂದರ್ಶಿಸಿ ತಿರುವಾರೂರಿಗೆ ಬರುವನು. ಅಲ್ಲಿರುವ ದೇವಾಶಿರ್ಯ ಮಂಟಪವನ್ನು ಹೊಕ್ಕು ಅಲ್ಲಿರುವ ಶಿವಭಕ್ತರಿಗೆ ವಂದಿಸದೆ, ಅವರೊಡನೆ ಬೆರೆಯದೆ ಮುಂದೆ ಸಾಗಿದ ಸುಂದರನನ್ನೂ ಹಾಗೂ ಅವನನ್ನು ಆಳಾಗಿಸಿಕೊಂಡ ಶಿವನನ್ನೂ ಭಕ್ತರ ಕೂಟಕ್ಕೆ ಹೊರಗೆಂದು ವಿಱನ್‌ಮಿಂಡನು ಬಹಿಷ್ಕರಿಸುವನು. ಸುಂದರನು ತಿರುತ್ತೊಂಡತ್ತೊಗೈಯನ್ನು ಹಾಡಿದ ಮೇಲೆ ಬಹಿಷ್ಕಾರವನ್ನು ತೆಗೆದುಹಾಕಲಾಗುವುದು. ಶಿವರಹಸ್ಯದಲ್ಲಿ ಬಂದಿರುವಂತೆ ಕೇರಳದೇಶದ ಅರುಣಾದ್ರಿಯೆಂಬ ಗ್ರಾಮದಲ್ಲಿ ಹಾರಭಟ (ವೀರೋದ್ಭಟ) ನೆಂಬ ಶಿವಭಕ್ತನಿದ್ದನು. ಅವನು ಭೂಮಂಡಲವನ್ನೆಲ್ಲಾ ಸಂಚರಿಸಿ ಕಮಲಾಲಯಕ್ಕೆ ಬಂದು ನೆಲಸುವನು. ಶಿವಾಲಯದಲ್ಲಿ ಸುಂದರನು ಭಕ್ತರನ್ನು

ಕಡೆಗಣಿಸಿ ನಡೆದದ್ದರಿಂದ ಕೋಪಗೊಂಡ ವೀರೋದ್ಭಟನು ಅವನನ್ನು ಕೊಲ್ಲಲು ಬರುವನು. ಹೆದರಿದ ಸುಂದರನು ದೇವಾಲಯದ ಗರ್ಭಗುಡಿಯನ್ನು ಹೊಕ್ಕು ಬಾಗಿಲನ್ನು ಭದ್ರಪಡಿಸುವನು. 'ವಿನಯವಿಲ್ಲದ ಈ ಯುವಕ ಶೈವಬ್ರಾಹ್ಮಣನಲ್ಲಿ ನಿನಗೆ ಪ್ರೀತಿಯಿರುವುದಾದರೆ, ಮಹಾದೇವಾ, ನೀನು ದೊಡ್ಡವನಾದರೂ ಹೊರಗೆ ಬಾ ನೋಡುತ್ತೇನೆ' ಎಂದು ವೀರೋದ್ಭಟನು ದಿಟ್ಟತನದಿಂದ ಶಿವನಿಗೆ ನುಡಿಯು ವನು. ಶಿವನು ಚಿಂತೆಗೊಂಡು ತನ್ನನ್ನು ಮರೆಹೊಕ್ಕ ಸುಂದರನಿಗೆ ವೀರೋದ್ಭಟನೇ ಮೊದಲಾದ ಭಕ್ತರನ್ನು ಸ್ತೋತ್ರಮಾಡೆಂದು ಹೇಳುವನು. ಗರ್ಭಗುಡಿಯಲ್ಲೇ ಸುಂದರನು ಭಕ್ತರ ಸ್ತುತಿಮಾಡುವನು. ಭಕ್ತರ ಸ್ತುತಿಯನ್ನು ಕೇಳಿದಮೇಲೆ ವೀರೋದ್ಭಟನ ಕೋಪ ಶಾಂತವಾಗುವುದು. ಹೀಗೆ ಪೆ. ಪು ದಲ್ಲಿ ಬರುವ ವಿಱನ್ ಮಿಂಡನ ಕಥೆಯೇ ಅಲ್ಪಸ್ವಲ್ಪ ವ್ಯತ್ಯಾಸ ಪಡೆದು ಶಿವರಹಸ್ಯದಲ್ಲಿ ವೀರೋದ್ಭಟನ ಕಥೆಯಾಗಿ ಬಂದಿದೆ.[11] ಪೆ. ಪು ದಲ್ಲಿ ಕಾರೈಕ್ಕಾಲಮ್ಮೈಯಾರ್ ಕಥೆಯಲ್ಲಿ ಸುಂದರನ ಕಥೆ ಬಂದಿಲ್ಲ (ಹರಿಹರನ 'ನಂಬಿಯಣ್ಣನ ರಗಳೆ'ಯಲ್ಲಿ ಕಾರಿಕಾಲಮ್ಮೆ ಕೈಲಾಸಕ್ಕೆ ತಲೆಯೂರಿ ಹೋಗುತ್ತಿರುವಾಗ ಅವಳನ್ನು ಚೇರಮ ಹಾಗೂ ನಂಬಿ ಯಣ್ಣ ಕಂಡ ಪ್ರಸಂಗ ಬರುತ್ತದೆ. ಹರಿಹರನಿಗೆ ಈ ಪ್ರಸಂಗ ತರಲು ಎಲ್ಲಿಂದ ಪ್ರಚೋದನೆ ಬಂದಿತೆಂಬುದು ತಿಳಿಯದು.) ಶಿವರಹಸ್ಯದಲ್ಲಿ ಕಾರೈಕ್ಕಾಲಮ್ಮೈ ಯಾರ್ ಪೂತವತೀಯಾಗಿರುವಳು. ಪೆ. ಪು ದಲ್ಲಿ ಬರುವಂತೆಯೇ ಅವಳ ಕಥೆ ಬರುತ್ತದೆ. ಇಲ್ಲೂ ಸುಂದರನು ಪೂತವತೀಯನ್ನು ಭೇಟಿಯಾದ ವಿವರ ಬರುವುದಿಲ್ಲ.

ಕಲಿಕಾಮನ ಕಥೆ ಎರಡರಲ್ಲೂ ಹೆಚ್ಚಿನ ವ್ಯತ್ಯಾಸಗಳಿಲ್ಲದೆ ಬಂದಿದೆ. ಪೆ. ಪು ದಲ್ಲಿ ಐದು ಪದ್ಯಗಳಲ್ಲಿ ಸೋಮಾಸಿಮಾರ ನಾಯನಾರನ ಕಥೆ ಬಂದಿದೆ. ಶೈವ ಬ್ರಾಹ್ಮಣನಾದ ಇವನು ಶಿವನ ಭಕ್ತರು ಯಾರೇ ಬಂದರೂ ಅವರಿಗೆ ನಮಸ್ಕರಿಸಿ ಅಗತ್ಯವಿದ್ದುದನ್ನು ಕೊಟ್ಟು ಪ್ರೀತಿ ತೋರುತ್ತಿದ್ದನು. ಶಿವನ ಭಕ್ತರೇ ತನಗೆ ಒಡೆಯರು, ಪಂಚಾಕ್ಷರಿ ಜಪ ಮಾಡುವುದೇ ತನ್ನ ಕರ್ತವ್ಯವೆಂದು ಭಾವಿಸಿದ್ದ ಸೋಮಾಸಿಮಾರನು ತೋಟಗಳಿಂದ ತುಂಬಿದ್ದ ತಿರುವಾರೂರಿಗೆ ಹೋಗಿ ವನ್ ತೊಂಡ (ಸುಂದರ) ನನ್ನು ನೋಡಿ ಅವನ ಸಖ್ಯ ಬೆಳೆಯಿಸಿ ಪಂಚೇಂದ್ರಿಯಗಳನ್ನು ಹದ್ದುಬಸ್ತಿಗೆ ಒಳಪಡಿಸಿ ಶಿವಲೋಕಕ್ಕೆ ಸಂದನೆಂದು ಪೆ. ಪು. ದಲ್ಲೂ ಹೇಳಲಾಗಿದೆ.

---

11 ಸುಂದರನು ಭಕ್ತರನ್ನು ಕಡೆಗಣಿಸಿ ನಡೆದದ್ದನ್ನು ನೋಡಿ ವೀರೋದ್ಭಟನು ಅವ ನನ್ನು ಕೊಲ್ಲಲು ಹೋಗುವನು. ಇದು ಹೊಸತು. ವಿಱನ್‌ಮಿಂಡನನ್ನು ಕುರಿತು ತಮಿಳು, ಕನ್ನಡ, ತೆಲುಗು ಸಾಹಿತ್ಯಗಳಲ್ಲಿ ಬರುವ ಉಲ್ಲೇಖಗಳಲ್ಲೆಲ್ಲೂ ಇದು ಕಾಣಬರುವುದಿಲ್ಲ. ಸುಂದರನಿಗೂ ಅವನನ್ನು ಸೇವಕನನ್ನಾಗಿ ಮಾಡಿಕೊಂಡ ಶಿವನಿಗೂ ಬಹಿಷ್ಕಾರವನ್ನು ವಿಱನ್‌ಮಿಂಡನು ಹಾಕುವನು. ಇದು ಶಿವರಹಸ್ಯದಲ್ಲಿ ಬರುವುದಿಲ್ಲ.

ಶಿವರಹಸ್ಯದಲ್ಲಿ ಸೋಮಯಾಜಿಮಾರನು ಯಾಗಶೀಲರ ವಂಶದಲ್ಲಿ ಜನಿಸಿ ಬಂದ ನೆಂದೂ ಶ್ರೌತಕರ್ಮಗಳಲ್ಲಿ ಆಸಕ್ತನಾಗಿದ್ದನೆಂದೂ ಕಮಲಾಲಯ ಕ್ಷೇತ್ರಕ್ಕೆ ಹೋಗಿ ಸುಂದರೇಶ್ವರಸ್ವಾಮಿಯನ್ನು ಕಂಡು ಅವನ ಆದೇಶದಂತೆ ಹವಿಸ್ಸನ್ನು ಹೋಮ ಮಾಡುತ್ತಿರಲು ಶಿವನು ಇವನ ಭಕ್ತಿಯನ್ನು ಲೋಕಕ್ಕೆ ತಿಳಿಯಪಡಿಸಲು ನೀಚ ವೇಷವನ್ನು ಧರಿಸಿ ಬಂದು ನಾನಾವಿಧದಲ್ಲಿ ಪರೀಕ್ಷಿಸಿ ಇವನ ಭಕ್ತಿಗೆ ಮೆಚ್ಚಿ ಸಾರೂಪ್ಯ ಮೋಕ್ಷವನ್ನು ಅನುಗ್ರಹಿಸಿದನೆಂದೂ ಹೇಳಲಾಗಿದೆ. ಸೋಮಾಸಿ ಮಾರನು ಸುಂದರನು ಹೇಳಿದ ವಿಧಿಗನುಗುಣವಾಗಿ ಯಾಗಮಾಡಿದುದೂ ಶಿವನು ಇವನ ಭಕ್ತಿಯನ್ನು ಪರೀಕ್ಷಿಸಲು ನೀಚವೇಷ ಧರಿಸಿ ಬಂದುದೂ ಭಕ್ತಿಗೆ ಮೆಚ್ಚಿ ಇವನಿಗೆ ಸಾರೂಪ್ಯ ಮೋಕ್ಷವನ್ನು ಅನುಗ್ರಹಿಸಿದುದೂ ಪೆ. ಪು ದಲ್ಲಿ ಬರುವುದಿಲ್ಲ. (ಹರಿಹರನ ' ನಂಬಿಯಣ್ಣನ ರಗಳೆ 'ಯಲ್ಲೂ ಸೋಮಾಸಿಮಾರನು ತಾನು ಮಾಡ ಲಿರುವ ಯಾಗಕ್ಕೆ ಶಿವನನ್ನು ಬರಲು ಒಪ್ಪಿಸುವಂತೆ ನಂಬಿಯಣ್ಣನನ್ನು ಕೇಳಿಕೊಳ್ಳು ವನು. ಅಂತೆಯೇ ನಂಬಿಯಣ್ಣನು ಶಿವನನ್ನು ಒಪ್ಪಿಸುವನು. ಹರಿಹರ ಪ್ರತ್ಯೇಕವಾಗಿ ಸೋಮಾಸಿಮಾರನನ್ನು ಕುರಿತು ರಗಳೆಯೊಂದನ್ನು ಬರೆದಿರುವನು. ಈ ಯಾಗ ಪ್ರಸಂಗ ಪೆ. ಪು ದಲ್ಲಿಲ್ಲದುದರಿಂದ ಹರಿಹರ ಜನಪದದಿಂದ ಇದನ್ನು ಸ್ವೀಕರಿಸಿರ ಬಹುದು, ಇಲ್ಲವೇ ಸಂಸ್ಕೃತ ಕೃತಿಗಳಿಂದ ಪ್ರೇರಣೆ ಪಡೆದಿರಬಹುದು ಎಂದು ಊಹಿಸಬೇಕಾಗುತ್ತದೆ.)

ಪೆ. ಪು ದಲ್ಲಿ ಪೆರುಮಿಳಲೈ ಕ್ಕುಱುಮ್ಬ ನಾಯನಾರನ ಕಥೆ ಹನ್ನೊಂದು ಪದ್ಯ ಗಳಲ್ಲಿ ಬಂದಿದೆ. ಪೆರುಮಿಳಲೈ ಎಂಬ ಊರಿನಲ್ಲಿ ಮಿಳಲೈ ಕುಱುಂಬನಾರ್ ಎಂಬ ಶೈವಭಕ್ತನು ಶಿವಭಕ್ತರುಗಳ ಸೇವೆಯನ್ನು ವೃತ್ತಿಯನ್ನಾಗಿ ಹೊಂದಿದ್ದನು. ಒಮ್ಮೆ ತಿರುತ್ತೊಂಡತ್ತೊಗೈಯನ್ನು ಹಾಡಿದ ಸುಂದರನ ಬಗ್ಗೆ ಕೇಳಿದ ಅವನು ಸುಂದರನ ಪಾದಧ್ಯಾನದಿಂದಲೇ ತನಗೆ ಮುಕ್ತಿಯೆಂದು ತ್ರಿಕರಣಪೂರ್ವಕವಾಗಿ ನಂಬಿದ್ದನು. ಈ ನಂಬಿಕೆಯಿಂದ ಅವನು ಸುಂದರನ ಹೆಸರನ್ನು ಮಂತ್ರವೆಂಬಂತೆ ಸದಾ ಉಚ್ಚರಿಸ ತೊಡಗಿದನು. ಸೋಜಿಗವೆಂದರೆ, ಅವನು ಅದರಿಂದ ಅಷ್ಟಸಿದ್ಧಿಗಳನ್ನು ಪಡೆದನು. ಹೀಗಿರುವಲ್ಲಿ, ನಂಬಿಯಾರೂರನು ತಿರುವಂಜಿಕಳಂಗೆ ಬರುವನೆಂಬುದನ್ನು ಅಂತರ್ ಜ್ಞಾನದಿಂದ ಅವನು ತಿಳಿದನು. ನಂಬಿಯು ಕೈಲಾಸವನ್ನು ಸದ್ಯದಲ್ಲೇ ಪ್ರವೇಶಿಸುವ ನೆಂಬುದನ್ನೂ ತಿಳಿದ ಅವನು, ನಂಬಿಯಿಲ್ಲದ ಪ್ರಪಂಚ ತನ್ನ ಪಾಲಿಗೆ ಕಣ್ಣಿಲ್ಲದವನ ಬಾಳಿನಂತೆ ಎಂದು ತೀರ್ಮಾನಿಸಿ ನಂಬಿಯೊಡನೆ ತಾನೂ ಕೈಲಾಸಕ್ಕೆ ಹೋಗಲು ನಿರ್ಧರಿಸುವನು. ಯೋಗಸಿದ್ಧಿಯ ಮೂಲಕ ಅವನು ಕೈಲಾಸವನ್ನೂ ಶಿವ ಹಾಗೂ ನಂಬಿಯ ಪಾದವನ್ನೂ ಸೇರುವನು. ಇದಿಷ್ಟು ಪೆ. ಪು ದಿಂದ ತಿಳಿದುಬರುವ ವಿವರ ಗಳು. ಪೆ.ಪು ದ ಪೆರುಮಿಳಲೈ ಕುರುಂಬರ ಕಥೆಗೂ ಶಿವರಹಸ್ಯದಲ್ಲಿ ಬರುವ ಶೂರ ಶರ್ಮ (ಶೂರಸೇನ)ನ ಕಥೆಗೂ ಸಂಬಂಧವೇ ಇಲ್ಲ. ಶಿವರಹಸ್ಯದಲ್ಲಿ ಶೂರಶರ್ಮನು

ಶಿವನ ಮಹಿಮೆಯನ್ನು ಕೇಳಿ, ಮೊದಲಿಗೆ ಸುಂದರನಾಥನ ಪಾದಸ್ಮರಣ ನಿರತ ನಾದನು ಎಂಬ ಮಾತು ಬರುತ್ತದೆ. ಇದರ ಹೊರತಾಗಿ ಸುಂದರನಿಗೂ ಇವನಿಗೂ ಯಾವ ವಿಧದ ಸಂಬಂಧವೂ ಕಾಣಬರುವುದಿಲ್ಲ. ಶೂರಶರ್ಮನು ತನ್ನ ಮನೆಯಲ್ಲಿ ಶ್ರಾದ್ಧಮಾಡುತ್ತಿದ್ದಾಗ ಶಿವ ಇವನನ್ನು ಪರೀಕ್ಷಿಸಬೇಕೆಂದು, ಭಸ್ಮಧಾರಣಮಾಡಿದ ಚಂಡಾಲನಾಗಿ ಬರುವನು. ಶೂರಶರ್ಮನು ಇವನನ್ನು ನೋಡಿ ಪಿತೃಕಾರ್ಯಕ್ಕೆ ಸಿದ್ಧಮಾಡಿದ್ದ ಹವಿಸ್ಸನ್ನು ಇವನಿಗೇ ಪ್ರಥಮವಾಗಿ ಕೊಡುವನು. ಇದನ್ನು ನೋಡಿ ಶ್ರಾದ್ಧಕ್ಕೆ ಆಹ್ವಾನಿತರಾಗಿದ್ದ ಬ್ರಾಹ್ಮಣರು ಶೂರಶರ್ಮನನ್ನು ನಿಂದಿಸಿ, ಅವನ ಮನೆಯಿಂದ ಹೊರಹೋಗುವರು. ಶಿವ ಪಾರ್ವತಿಯೊಡನೆ ಪ್ರತ್ಯಕ್ಷನಾಗಿ ಶೂರಶರ್ಮನಿಗೆ ಅವನ ತಂದೆತಾಯಿಗಳು ಸ್ವರ್ಗಕ್ಕೆ ಹೋಗುತ್ತಿರುವುದನ್ನೂ ಅವರು ಸಂತುಷ್ಟರಾಗಿ ಮಗನಿಗೆ ಆಶೀರ್ವದಿಸುತ್ತಿರುವುದನ್ನೂ ತೋರಿಸುವನು. ಅಷ್ಟೇ ಅಲ್ಲ, ಪತ್ನಿಯೊಡನೆ ಶೂರಶರ್ಮನು ಕೈಲಾಸಕ್ಕೆ ಹೋಗಲು ಅಗತ್ಯವಿದ್ದ ಯೋಗ ಶಕ್ತಿಯನ್ನೂ ಶಿವನು ಅವನಿಗೆ ಅನುಗ್ರಹಿಸುವನು. ಈ ಕಥಾಭಾಗ ಶಿವರಹಸ್ಯದಲ್ಲಿ ಕಾಣಬರುತ್ತದೆ, ಪೆರಿಯಪುರಾಣದಲ್ಲಿ ಕಾಣಬರುವುದಿಲ್ಲ. ಹರಿಹರನ 'ನಂಬಿಯಣ್ಣನ ರಗಳೆ'ಯಲ್ಲಿ ಈ ಕಥಾಭಾಗ ಬರುವುದಿಲ್ಲ. ಅಲ್ಲಿ ಬರುವ ಪೆರುಮಿಳಲೈ ಕುರುಂಬರು ನಂಬಿಯಣ್ಣನ ಮೇಲಿನ ಭಕ್ತಿಯಿಂದ ಅವನ ಮುಂದೆ ಕೊಡೆ ಹಿಡಿದು ಕುಣಿಕುಣಿದು ಸಾಗುವ ವೃತ್ತಿ ಹಿಡಿಯುವನು; ನಂಬಿಯಣ್ಣನ ಜೊತೆಯಲ್ಲೇ ಕೈಲಾಸಕ್ಕೆ ಹೋಗುವನು. ನಂಬಿಯಣ್ಣ ಶಿವನಿಗೆ ಹೇಳಿ ತನ್ನ ನೆಚ್ಚಿನ ಈ ಭಕ್ತನಿಗೆ ಗಣಪದವಿಯನ್ನೂ ಕೊಡಿಸುವನು. ಹರಿಹರನ ಈ ಬಗೆಯ ನಿರೂಪಣೆಗೆ ಎಲ್ಲಿಂದ ಪ್ರೇರಣೆ ದೊರೆಯಿತೆಂದು ಹೇಳಲಾಗದು.)

ಪೆ. ಪು ದ ಕೊನೆಯ ಭಾಗವಾದ 'ವೆಳ್ಳಾನೈ ಚರುಕ್ಕಮ್'ನಲ್ಲಿ ಚೇರಮಾನ್ ಪೆರುಮಾಳ್‌ನ ಕಥೆ ಬರುತ್ತದೆ. ಚೇರನಾಡಿನ ದೊರೆಯಾದ ಈತ ವನ್‌ತೊಂಡರ (=ಸುಂದರನ) ಸ್ನೇಹಿತನು. ಪ್ರಸಿದ್ಧ ಶೈವಕ್ಷೇತ್ರಗಳನ್ನೆಲ್ಲಾ ಸುತ್ತಿ ಚೇರನಾಡಿಗೆ ಬರಲು ಸುದ್ದಿ ತಿಳಿದ ಚೇರಮಾನ್ ಪೆರುಮಾಳನು ತನ್ನ ಪಟ್ಟಣವನ್ನು ಅಲಂಕರಿಸಿ ವೈಭವದಿಂದ ಅವನನ್ನು ಸ್ವಾಗತಿಸುವನು; ಎರಡು ದೇಹ ಜೀವವೊಂದು ಎನ್ನುವಂತೆ ಇರುವ ಸ್ನೇಹಿತನಿಗೆ ನಮಸ್ಕರಿಸಿ ಕ್ಷೇಮಸಮಾಚಾರ ತಿಳಿಸುವನು. ತನ್ನಲ್ಲಿಯೇ ಹಲವು ದಿವಸ ಮಿತ್ರನಾದ ಸುಂದರನನ್ನು ಇರಿಸಿಕೊಂಡು ಅರಸನು ಸತ್ಕರಿಸುವನು. ಅಲ್ಲಿಂದ ಮುಂದೆ ಸುಂದರನು ಆ ನಾಡಿನ ಶಿವಕ್ಷೇತ್ರಗಳಿಗೆ ಹೋಗಿ ಶಿವನನ್ನು ಸ್ತುತಿಸಿ ಮಹೋದೈ ಎಂಬ ಊರಿಗೆ ಬರುವನು. ಅಲ್ಲಿಂದ ಮುಂದೆ ತಿರುವಂಜಿಕಳಂಗೆ ಬರುವನು. ಶಿವ ತನ್ನ ಗಣವರರನ್ನು ಅಲ್ಲಿಗೆ ಕಳುಹಿಸಿ ಬಿಳಿಯ ಆನೆಯ ಮೇಲೆ ನಂಬಿಯಾರೂರನ್ನು ಕರೆದುತರುವಂತೆ ಆದೇಶ ನೀಡುವನು. ಸುಂದರನು ಕೈಲಾಸದಿಂದ ಬಂದ ಗಣವರರ ಬಿನ್ನಪಕ್ಕೆ ಒಪ್ಪಿ ಬಿಳಿಯ ಆನೆಯನ್ನು ಏರಿ

ಕೈಲಾಸಕ್ಕೆ ಹೋಗುವನು. ಸುದ್ದಿ ತಿಳಿದ ಚೇರಮಾನ್‌ನೂ ಕುದುರೆಯೇರಿ ಸುಂದರನನ್ನು ಹಿಂಬಾಲಿಸುವನು. ಕೈಲಾಸದ ದಕ್ಷಿಣಭಾಗದ ಬಾಗಿಲಿನಲ್ಲಿ ಮಿತ್ರರೀರ್ವರೂ ಭೇಟಿಯಾದರು. ಶಿವನ ಬಳಿಗೆ ಹೋದ ಸುಂದರನು ತನ್ನ ಪ್ರೀತಿಯ ಮಿತ್ರ ಬಾಗಿಲ ಬಳಿಯೇ ನಿಂತಿರುವ ವಿಷಯ ಶಿವನಿಗೆ ಹೇಳುವನು. ಶಿವ ತನ್ನವರಿಗೆ ಆ ಹಿರಿಯ ಭಕ್ತನನ್ನು ಕರೆದುತನ್ನಿ ಎನ್ನುವನು. ತನ್ನ ಬಳಿ ಬಂದು ನಮಸ್ಕರಿಸಿದ ಚೇರಮಾನ್‌ನಿಗೆ 'ನಾವು ಕರೆಕಳುಹಿಸದೇ ನೀನಿಲ್ಲಿಗೇಕೆ ಬಂದೆ?' ಎಂದು ನಗುತ್ತಾ ಕೇಳುವನು. ಅದಕ್ಕೆ ಚೇರಮಾನ್‌ನು 'ನಿಮ್ಮ ಸೇವಕನಾದ ನಾನು ಆರೂರನ ಪಾದಗಳನ್ನು ಸ್ತುತಿಸಿ ಬಿಳಿಯಾನೆಗೆ ನಮಸ್ಕರಿಸುತ್ತ ಇಲ್ಲಿಗೆ ಬಂದು ಸೇರಿರುವೆನು' ಎಂದು ಹೇಳಿ, ಮತ್ತೆ, ನಿಮ್ಮ ಮೇಲಣ ಪ್ರೀತಿಯಿಂದ ನಾನು 'ತಿರುವುಲಾಪ್ಪುಱಂ' ಅನ್ನು ರಚಿಸಿರುವೆನು. ಅದನ್ನು ನೀವು ಕೇಳಬೇಕು ಎಂದು ಪ್ರಾರ್ಥಿಸುವನು. ಶಿವ 'ತಿರುವುಲಾಪುಱಂ' ಅನ್ನು ಕೇಳಿ ಮೆಚ್ಚಿ, ಆಲಾಲಸುಂದರನೊಡನೆ ಚೇರಮಾನ್‌ನೂ ಕೈಲಾಸದಲ್ಲಿ ಗಣವರನಾಗಿ ಸೇವೆಸಲ್ಲಿಸುವಂತೆ ಅನುಗ್ರಹಿಸುವನು. ಇದಿಷ್ಟು ಪೆ. ಪು ದಿಂದ ತಿಳಿದುಬರುವ ವಿವರಗಳು. ಶಿವರಹಸ್ಯದಲ್ಲಿ ಚೇರಮಾನ್ ಪೆರುಮಾಳ್ ಮಹಾಗೋದನಾಗಿರುವನು. ಕೇರಳದೇಶದ ಮಹೋದಯ ಪಟ್ಟಣದ ಅರಸನಾಗಿದ್ದ ಇವನು ಅರಸುತನ ಶಿವಭಕ್ತಿಗೆ ತೊಡರೆಂದು ಭಾವಿಸಿ ರಾಜ್ಯವನ್ನು ತ್ಯಜಿಸಿ ಕಾಡಿಗೆ ನಡೆಯುವನು. ಮತ್ತೆ ರಾಜ್ಯಕ್ಕೆ ಹಿಂತಿರುಗಿ ಬರುವಂತೆ ಮಂತ್ರಿಗಳು ಒತ್ತಾಯಿಸುವರು. ಶಿವನು ಒಪ್ಪಿಗೆಯಿತ್ತರೆ ತಾನು ಬರುವುದಾಗಿ ಒತ್ತಾಯಿಸಿದ ಮಂತ್ರಿಗಳಿಗೆ ಅರಸನು ನುಡಿಯುವನು. ಶಿವ ಮಹಾಗೋದನಿಗೆ, ರಾಜ್ಯಪರಿಪಾಲನೆಯನ್ನು ನನ್ನ ಸೇವೆಯೆಂದೇ ತಿಳಿ, ಇದರಿಂದ ನನ್ನ ಪೂಜಾದಿಗಳಿಗೆ ಹೆಚ್ಚಿನ ಅನುಕೂಲ ಕಲ್ಪಿಸಲು ಸಾಧ್ಯವಾಗುತ್ತದೆ ಎಂದು ಹೇಳುವನು. ಶಿವನ ಅಪ್ಪಣೆಯಂತೆ ಅರಸನು ತನ್ನ ರಾಜ್ಯಕ್ಕೆ ಹಿಂತಿರುಗುವನು. ಭಸ್ಮಧರಿಸಿದ ಅರಸನನ್ನು ತಾಪಸನೆಂದೇ ಭಾವಿಸಿ ಅವನಿಗೆ ವಂದಿಸುವನು. ಶಿವನಿಂದ ಪತ್ರವನ್ನು ತಂದ ಬಡ ಸಂಗೀತಗಾರನೊಬ್ಬನಿಗೆ ತನ್ನ ಸಮಸ್ತ ರಾಜ್ಯವನ್ನೇ ಕೊಡಹೊರಡುವನು. ನಿತ್ಯವೂ ತಾಂಡವೇಶ್ವರನ ಕಾಲಗೆಜ್ಜೆಯ ನಾದವನ್ನು ಕೇಳುತ್ತಿದ್ದ ಇವನಿಗೆ ಒಂದು ದಿನಸ ಅದು ಕೇಳದೆ ಇರಲು ತನ್ನಿಂದ ಅಪರಾಧವಾಯಿತೆಂದು ಬಗೆದು ತನ್ನ ಎದೆಯನ್ನು ಸೀಳಿಕೊಳ್ಳಲು ಹೊರಡುವನು. ಅವನನ್ನು ತಡೆದ ಶಿವನು, ಸೌಮ್ಯೇಶ್ವರನ (= ಸುಂದರನ) ಶ್ರೀಗಾನವನ್ನು ಕೇಳುತ್ತ ಮೈಮರೆತದ್ದರಿಂದ ವಿಳಂಬವಾಯಿತೆಂದು ನುಡಿಯುವನು. ಅರಸನು ಹೇಮಸಭೆಗೆ ಹೋಗಿ ಮಹಾದೇವನ ಪಾದಗಳನ್ನು ಕಾಣುವೆನೆಂದು ಮಧುರೆಗೆ ಬರುವನು. ಶಿವ ಅಲ್ಲಿ ರಾಜನಿಗೆ ಕಾಲ್ಗಡಗದ ಉಲಿಯನ್ನು ಕೇಳಿಸುವನು. ಅಲ್ಲಿಯೂ ಶಿವ ರಾಜನ ಕನಸಿನಲ್ಲಿ ಬಂದು 'ಸೌಮ್ಯೇಶ್ವರನ ಸಂಗೀತವನ್ನು ಕೇಳುತ್ತ ಮೈಮರೆತದ್ದರಿಂದ ಕಾಲವಿಳಂಬವಾಯಿತು' ಎಂದು ಹೇಳುವನು. ಕುತೂಹಲಗೊಂಡ ಅರಸ ಕಮಲಾಲಯ ಕ್ಷೇತ್ರಕ್ಕೆ ಬಂದು ಸೌಮ್ಯೇಶ್ವರ

ನನ್ನು (= ಸುಂದರನನ್ನು) ಕಾಣುವನು. ಅರಸನೂ ಸುಂದರನೂ ಸ್ನೇಹಿತರಾಗಿ ಬಹಳಕಾಲ ಜೊತೆಯಲ್ಲಿಯೇ ಇದ್ದು ನಂತರ ಈರ್ವರೂ ಪಾಂಡ್ಯದೇಶದ ಶಿವದೇವಾಲಯಗಳನ್ನು ನೋಡಿ, ಹಾಲಾಸ್ಯ ಕ್ಷೇತ್ರಕ್ಕೆ ಬಂದು ತಾಂಡವೇಶ್ವರನಿಗೆ ವಂದಿಸಿ ಮಹೋದಯಪುರಕ್ಕೆ ಬರುವರು. ತನ್ನ ರಾಜ್ಯದಲ್ಲಿ ಸುಂದರರನ್ನು ಹಲವು ದಿವಸ ಇರಿಸಿಕೊಂಡು ಅರಸನು ಅವನನ್ನು ಸನ್ಮಾನಿಸಿ, ಕಮಲಾಲಯಕ್ಷೇತ್ರಕ್ಕೆ ಕಳುಹಿಸಿ ಕೊಡುವನು. ಪೆ. ಪು ದಲ್ಲಿ ಬರುವ ಚೇರಮಾನ್‌ನ ಕಥೆಗೂ ಶಿವರಹಸ್ಯದಲ್ಲಿ ಬರುವ ಮಹಾಗೋದನ ಕಥೆಗೂ ಎಲ್ಲೂ ಹೊಂದಿಕೆ ಕಂಡುಬರುವುದಿಲ್ಲ. ಚೇರಮಾನ್ ಹಾಗೂ ಸುಂದರ ಮಿತ್ರರಾಗಿದ್ದರೆಂಬ, ಚೇರಮಾನ್‌ನ ರಾಜ್ಯಕ್ಕೆ ಸುಂದರ ಬಂದಿದ್ದನೆಂಬ ಈ ಎರಡು ಅಂಶಗಳ ಹೊರತಾಗಿ ಮಿಕ್ಕೆಲ್ಲವೂ ಬೇರೆಯಾಗಿದೆ.

ಹೆಚ್ಚಿನ ತೌಲನಿಕ ಅಧ್ಯಯನಕ್ಕೆ ಸಹಾಯವಾಗಲೆಂದು ಶಿವರಹಸ್ಯದಲ್ಲಿ ಬರುವ ಸುಂದರನ ಕಥೆಯನ್ನೂ ಸುಂದರನ ಸಂಬಂಧವಿರುವ ಬೇರೆ ಭಕ್ತರ ಕಥೆಯನ್ನೂ ಸಂಕ್ಷಿಪ್ತವಾಗಿ ಮುಂದೆ ಕೊಡಲಾಗಿದೆ.

ಸುಂದರಭಕ್ತನ ಕಥೆ

ಪಾರ್ವತಿಯಿಂದ ಪ್ರಶ್ನಿಸಲ್ಪಟ್ಟ ಮಹಾದೇವನು ಅವಳ ಸಂದೇಹಗಳನ್ನೆಲ್ಲಾ ಪರಿಹರಿಸುವನು. ಶಂಕರನು ದೇವಿಗೆ ಹೇಳಿದುದನ್ನು ಕುಮಾರಸ್ವಾಮಿಯು ಜೈಗೀಷವ್ಯನಿಗೆ ತಿಳಿಸುವನು.

ದೇವಿಯು ಪರಮೇಶ್ವರನನ್ನು ಕುರಿತು "ಮುಂದೆ ಕಲಿಯುಗದಲ್ಲಿ ಅವತರಿಸುವ ಪ್ರಸಿದ್ಧರಾದ ಶಿವಪಾದಪೂಜಕರಾರು? ಅವರ ಚರಿತ್ರೆಯನ್ನು ವಿಸ್ತಾರವಾಗಿ ನನಗೆ ತಿಳಿಸು" ಎಂದು ಕೇಳಿಕೊಳ್ಳುವಳು. (ಅಧ್ಯಾಯ ೧೮. ಶ್ಲೋಕ ೧)

ಮಹೇಶ್ವರಿ, ಈ ಕಲಿಯುಗದಲ್ಲೂ ನನ್ನ ಭಕ್ತಿಯ ಮಹಿಮೆಯನ್ನು ಪ್ರಕಾಶಪಡಿಸುವುದಕ್ಕೋಸ್ಕರವೇ ಲೋಕದಲ್ಲಿ ನನ್ನ ಭಕ್ತರು ನನ್ನಿಂದ ಆಗಾಗ ನಿರ್ಮಿಸಲ್ಪಡುವರು (೧೮. ೫–೬) ಒಟ್ಟು ನನ್ನ ಭಕ್ತಿಯಲ್ಲಿ ಪ್ರಾವೀಣ್ಯತೆಯನ್ನು ತೋರ್ಪಡಿಸುವವರು ಅರುವತ್ತುಮೂರು ಮಂದಿ ಮಾತ್ರ ಇರುವರು. ಅವರಲ್ಲಿ ಮೊದಲಿನವನು ಮುನಿಶ್ರೇಷ್ಠನಾದ ಮಹಾತೇಜಸ್ವಿಯಾದ ಉಪಮನ್ಯುವೆಂಬುವನು. ಆತನು ಇತರ ಭಕ್ತರಿಗೆಲ್ಲಾ ಶಿವಭಕ್ತಿಮಹಿಮೆಯನ್ನು ಉಪದೇಶಿಸುತ್ತಾನೆ. ದೇವಿ, ಆ ಭಕ್ತರ ಕಥೆಗಳನ್ನು ನಿನಗೆ ಹೆಚ್ಚು ಸಂಗ್ರಹ ಮತ್ತು ವಿಸ್ತಾರಗಳಿಲ್ಲದಂತೆ ಸಾಮಾನ್ಯವಾಗಿ ಹೇಳುತ್ತೇನೆ. ಕೇಳು (೧೮. ೭–೮)—ಎಂದು ಶಿವ ಹೇಳುವನು.

ಶಾಂತವೂ ಶುಚಿಕರವೂ ಆದ ಕಮಲಸಮೂಹಗಳ ಮೇಲಿರುವ ದುಂಬಿಗಳ ಧ್ವನಿಯೂ, ವಾಯುವು ಬೀಸುವ ಶಬ್ದವೂ ಮನೋಹರವಾಗಿ ಈ ಕೈಲಾಸಪರ್ವತ ಶಿಖರದಲ್ಲಿ ತೋರಿಬರುತ್ತಿದ್ದಾಗ ನನ್ನ ಪಾದಕಮಲವನ್ನು ಪೂಜೆಮಾಡುವ ಸಂತೋಷ ದಿಂದ ಒಬ್ಬ ಗಣಶ್ರೇಷ್ಠನು ಹೂಗಳನ್ನು ಕೊಯ್ದು ತರುವುದಕ್ಕೋಸ್ಕರ ಆ ಶಿಖರದ ಕಾಡಿಗೆಹೋದನು (೧೮. ೨೪). ಅವನು ಯೌವನದಿಂದ ಶೋಭಿಸುತ್ತಾ, ಕೋಟಿ ಮನ್ಮಥರಂತೆ ಹೊಳೆಯುವ ತನ್ನ ದೇಹಪ್ರಭೆಯಿಂದ ದಿಗ್ಭಾಗಗಳನ್ನೆಲ್ಲಾ ಪ್ರಕಾಶಗೊಳಿ ಸುತ್ತಾ ಶುಭ್ರವಾದ ಭಸ್ಮವನ್ನು ತನ್ನ ದಿವ್ಯದೇಹಕ್ಕೆ ಅಲಂಕರಿಸಿಕೊಂಡು, ಮದಿಸಿದ ಆನೆಯ ಸೊಂಡಿಲಿನಂತಿರುವ ದಪ್ಪ ತೋಳಿನಿಂದ ಕಂಡುಬರುತ್ತಾ, ಆ ಗಣಶ್ರೇಷ್ಠನು ದೈತ್ಯಧ್ವಂಸಕನೆನಿಸಿ, ಹಣೆಯಲ್ಲಿ ಭಸ್ಮ ತ್ರಿಪುಂಡ್ರಧಾರಣೆ ಮಾಡಿಕೊಂಡು ದಿವ್ಯ ಮುಂಗುರುಳುಗಳಿಂದ ಶೋಭಿಸುತ್ತಿದ್ದನು (೧೮-೨೫). ಆ ಗಿರಿಯ ತಪ್ಪಲಿನಲ್ಲಿ ಸಿಹಿ ಮಾವಿನಮರದ ಚಿಗುರಿನ ಉತ್ಸವದಿಂದ ಪ್ರಕಾಶಿಸುತ್ತಿರುವ ವಸಂತಋತುವಿನ ಸೊಬಗು ಎಲ್ಲೆಲ್ಲಿಯೂ ಕಂಡುಬರುತ್ತಿತ್ತು. ಆಗ ಅರಳಿದ ಕೆಂದಾವರೆಯಂತೆ ದೇಹ ಕಾಂತಿಯನ್ನು ಪಡೆದು ಹೊರಚಿಮ್ಮುತ್ತಿರುವ ರತ್ನಶ್ರೇಷ್ಠದ ಪ್ರಭೆಯುಳ್ಳವಳಾಗಿ, ಕೋಗಿಲೆಯ ಮೃದುಮಧುರ ಧ್ವನಿಯನ್ನು ಅಳವಡಿಸಿಕೊಂಡಿದ್ದ ಓರ್ವ ಸುಂದರಿ ಯನ್ನು ಈ ಸುಂದರನೆಂಬ ನನ್ನಗಣಮುಖ್ಯನು ನೋಡಿ, ಕಲೆಗಳಲ್ಲಿ ನಿಪುಣನಾದ ಆತನು ಮನ್ಮಥ ಬಾಣಗಳಿಂದ ಹೊಡೆಯಲ್ಪಟ್ಟು, ತಾವರೆಗಣ್ಣಿನ ತುದಿಗಳಿಂದ ಸುರಿಯುವ ಕಣ್ಣೀರಿನಿಂದ ಧೈರ್ಯಗುಂದಿದವನಾಗಿ ಅವಳನ್ನು ಸ್ವಾಧೀನಪಡಿಸಿ ಕೊಳ್ಳಲು ಯತ್ನಿಸಿದನು (೧೮. ೨೭-೨೮). ಎಲೈ ಪಾರ್ವತಿಯೇ, ಅವಳು ನಿನ್ನ ಸಖಿ ಯರಿಗೆ ನಾಯಕಿಯಾಗಿದ್ದವಳು. ಆ ತಪ್ಪಲು ಪ್ರದೇಶದಲ್ಲಿ ಶ್ರೇಷ್ಠವಾದ ಗಂಧರ್ವ ಗಾನ ಮಾಡುತ್ತಾ ಮನ್ಮಥಮಾರ್ಗ ಪ್ರವೇಶಿನಿಯೊ ಎಂಬಂತಿದ್ದ ಆ ಸುಂದರಾಂಗಿ ಯನ್ನು ಈ ಸುಂದರನು ನೋಡಿದನು. (೧೮. ೨೯). ಶಿವಲಿಂಗಾರ್ಚಕನಾದರೂ ಇಂದ್ರಿಯಪರವಶನಾಗಿ ಆ ಸುಂದರನು ಅವಳನ್ನು ನೋಡಿ, ಚಂಚಲವಾದ ಮನ್ಮಥನ ಬಾಣಗಳಿಂದ ಹೊಡೆಯಲ್ಪಟ್ಟವನಾಗಿ, ಇಂದ್ರಿಯನಿಗ್ರಹವನ್ನು ಮಾಡಲಾರದೇ ಅವಳಲ್ಲಿ ಮೋಹಿತನಾದನು (೧೮. ೩೧). ಆ ಸುಂದರಿಯೂ ಸುಂದರನನ್ನು ನೋಡಿ ಅತ್ಯಾನಂದಭರಿತಳಾದಳು (೧೮. ೩೨). ಹೀಗೆ ಅವರಿಬ್ಬರೂ ಪರಸ್ಪರ ಕಾಮಾಸಕ್ತ ರಾಗಿ, ಮನ್ಮಥನ ಬಾಣರಾಶಿಗಳಿಂದ ಪೀಡಿತ ದೇಹವುಳ್ಳವರಾಗಿ, ಕಾಮಕೇಳಿಗಳಿಂದ ಸಂತೋಷ ಪಡೆಯಲು ಆ ಕಾಡಿನ ಮಧ್ಯದಲ್ಲಿರುವ ಲತಾವನದ ದಡದಲ್ಲಿ ಸ್ವೇಚ್ಛೆ ಯಾಗಿ ಕೊಂಚಕಾಲ ವಿಹರಿಸಿ, ಅನಂತರ ನನ್ನನ್ನು ಸೇವೆಮಾಡುವ ಮನಸ್ಸುಳ್ಳವ ರಾಗಿ, ಅಲ್ಲಿಂದ ಹೊರಟುಬಂದರು (೧೮. ೩೩).

ಸಭೆಗೆ ಆತುರಾತುರವಾಗಿ ಅವರಿಬ್ಬರೂ ಬಂದರು. ಸುಂದರನು ತನ್ನ ಸಮೀಪ ದಲ್ಲಿ ನಿಂತನು. ಆ ದಾಸಿಯು ನಿನ್ನ ಸನ್ನಿಧಾನಕ್ಕೆ ಸೇವೆಗಾಗಿ ಬಂದಳು. ಹೀಗೆ

ಏನೂ ತಿಳಿಯದವರಂತೆ ಬಂದು ನಿಂತಿರುವ ಅವರಿಬ್ಬರನ್ನೂ ನೋಡಿ ನಾನು ಸಂತೋಷದಿಂದ ಮನ್ಮಥಬಾಣಜಾಲಗಳಿಂದ ಪೀಡಿತನಾಗಿರುವ ಆ ಸುಂದರನನ್ನು ಕುರಿತು ಹೀಗೆ ಶಾಪವಿತ್ತೆನು: ಎಲೈ ಸುಂದರನೇ, ನೀನು ಇಲ್ಲಿ ವಿಶೇಷ ಕಾಮಾಸಕ್ತಿಯನ್ನು ತೋರ್ಪಡಿಸಿರುವುದರಿಂದ ಭೂಮಿಯಲ್ಲಿ ವಿಷಯಭೋಗಪರಂಪರೆಗಳನ್ನು ಅನುಭವಿಸುವುದಕ್ಕಾಗಿ ಮಾನವನಾಗಿ ಹುಟ್ಟು. ಅಲ್ಲಿಯೂ ನನ್ನ ದೇವಾಲಯಗಳಿರುವ ಶಿವಲಿಂಗದರ್ಶನ ಮಾಡುತ್ತಾ ಶೈವಧರ್ಮದಲ್ಲಿರು. ಪಾರ್ವತೀದೇವಿಯ ಸಖಿಯಾದ ಕಮಲಿನಿಯೂ ವಿಷ್ಣುವಿಗೆ ಲಕ್ಷ್ಮಿಯಂತೆ ಯಾವಾಗಲೂ ನಿನ್ನ ಪ್ರೇಮಪತ್ನಿಯಾಗಿ ಜನಿಸಲಿ, ಎಂದು ನಾನು ಸಾವಧಾನ ಮನಸ್ಸಿನಿಂದ ಸುಂದರನಿಗೆ ಹೇಳಿದೆನು (೧೮. ೩೫).

ಸಿಡಿಲಿಗೆ ಸಮಾನವಾದ ಆ ಮಾತನ್ನು ಕೇಳಿದ ಸುಂದರನು ಸಮಾಧಾನ ಚಿತ್ತದಿಂದ ನನ್ನನ್ನು ಸ್ತೋತ್ರಮಾಡಿ (೧೮. ೩೭-೪೮), ವಿನಯದಿಂದ ನಮ್ರನಾಗಿ ಮಾತನಾಡದೇ ಕೈಮುಗಿದುಕೊಂಡು ದೀನನಾಗಿ ನಿಂತುಕೊಂಡನು. ಲೋಕಸುಂದರನಾದ ಆ ಸುಂದರನಿಗೆ ನಾನು ಹೀಗೆಂದೆನು: ಗಣಶ್ರೇಷ್ಠನಾದ ಸುಂದರನೇ, ನೀನು ಈ ಕಮಲಿನಿಯೊಡನೆ ಕಾವೇರಿನದಿಯ ಪುಣ್ಯಕರವಾದ ಎರಡೂ ದಡಗಳಲ್ಲಿರುವ ಶಿವಕ್ಷೇತ್ರಗಳಲ್ಲೆಲ್ಲಾ ಇವಳೊಡನೆ ಸುತ್ತಿ, ಅಲ್ಲೆಲ್ಲಾ ನನ್ನನ್ನು ಚೆನ್ನಾಗಿ ಪೂಜಿಸಿ ಸ್ತೋತ್ರಮಾಡಿ ಪುನಃ ನನ್ನ ಸಮೀಪಕ್ಕೆ ಬಾ (೧೯. ೬,೨).

ಕಮಲಿನಿಯೂ ನಾಚಿಕೆಯಿಂದ ತಲೆಬಾಗಿ ನನ್ನನ್ನು ನಾನಾರೀತಿ ಸ್ತೋತ್ರಮಾಡಲು, ಭೂಮಿಯಲ್ಲಿ ನೀನು ನನ್ನ ಭಕ್ತನಾದ ಸುಂದರನೊಡನೆ ಸುಖಸಾಮ್ರಾಜ್ಯದಲ್ಲಿ ವಿಹರಿಸಿ, ಜಾಗ್ರತೆಯಾಗಿ ಕೈಲಾಸಕ್ಕೆ ಬಂದುಬಿಡು. ವಿಶೇಷವಾಗಿ ನನ್ನಲ್ಲಿಟ್ಟಿರುವ ಭಕ್ತಿಯಿಂದ ನೀನು ಮನುಷ್ಯಳಾದರೂ ಪೂರ್ವಜನ್ಮದ ಸ್ಮರಣೆಯು ಮಾತ್ರ ನಿನಗಿರುವುದು. ಶಿವಲಿಂಗಗಳಿಗೆ ಆಶ್ರಯವಾಗಿರುವ ಉತ್ತಮವಾದ ಕಮಲಾಲಯವನ್ನು ಹೊಂದಿ, ಅಲ್ಲಿ ಈ ಸುಂದರನೊಡನೆ ಸಂಗೀತ ನಾಟ್ಯಗಳಲ್ಲಿ ನಿರತಳೂ ಸಾಧ್ವಿಯೂ ಆಗಿ ಮನ್ಮಥಕ್ರೀಡೆಗಳಲ್ಲಿ ಸುಖಪಡೆದು ಅನಂತರ ನನ್ನ ಸಮೀಪಕ್ಕೆ ಹಿಂತಿರುಗಿ ಬಾ ಎಂದು ನಾನು ಕಮಲಿನೀ ಸುಂದರರಿಗೆ ಹೇಳಿದೆನು (೧೯. ೨೨-೨೪). ಕಮಲಿನೀ ಸುಂದರರು ನನಗೆ ವಂದಿಸಿ, ಮಹಾದೇವ, ಪುಣ್ಯಕರವಾದ ಕಾವೇರಿನದಿಯ ದಡದಲ್ಲಿರುವ ಅನೇಕ ಶಿವಕ್ಷೇತ್ರಗಳಲ್ಲಿ ನಿನಗೆ ವಿಶೇಷ ಪ್ರಿಯವಾಗಿಯೂ ಮುಖ್ಯವೂ ಉತ್ತಮವೂ ಆಗಿರುವುದು ಯಾವುದು? ಎಂದು ಸುಂದರನು ಕೇಳಿದನು (೧೯. ೨೫, ೨೮-೩೦). ಆದಕ್ಕೆ ನಾನು, ಕಮಲಾಲಯಸಂಜ್ಞಕರವಾದ ಕ್ಷೇತ್ರದಲ್ಲಿ ವಲ್ಮೀಕೇಶ್ವರನೆಂಬ ಹೆಸರಿನಿಂದ ಪ್ರಸಿದ್ಧಿ ಪಡೆದಿರುವೆನು. ಎಲೈ ಗಣಶ್ರೇಷ್ಠನೇ! ಹಿಂದೆ ಲಕ್ಷ್ಮೀದೇವಿಯು ಅಲ್ಲಿ ಬಹಳಕಾಲ ತಪಸ್ಸು ಮಾಡಿದ್ದಳು. ನೀನು ಅಲ್ಲಿಯೇ (ಕಮಲಾಲಯದಲ್ಲಿಯೇ) ಈ ಕಮಲಿನಿಯೊಡನೆ

ನೆಲಸಿ ನನ್ನನ್ನು ಸೇವಿಸು (೧೯. ೪೮). ಗಣಶ್ರೇಷ್ಠನಾದ ಸುಂದರನೇ, ಸ್ವಲ್ಪಕಾಲ ನಿನ್ನ ಭಕ್ತಿಯನ್ನು ಪರೀಕ್ಷೆ ಮಾಡಿ, ಅನಂತರ ಈ ಕಮಲಿನಿಯೊಡನೆ ನಿನಗೆ ಮದುವೆ ಮಾಡಿಸುತ್ತೇನೆ. ಎಲೈ ಗಣಾಗ್ರಣಿಯೇ! ಗೌರೀದೇವಿಯೊಡನೆ ನಿಯತವಾಗಿ ನೆಲಸಿರುವ ನನ್ನನ್ನು ಸಂಗೀತಧಾರಾಪೂರ್ವಕವಾಗಿ ಸ್ತೋತ್ರಮಾಡಿ, ಈ ಕಮಲಿನಿ ಯೊಡನೆ ನನ್ನನ್ನು ಚೆನ್ನಾಗಿ ಪೂಜೆಮಾಡಿ, ಅನಂತರ, ಸಕಲಜನ ಪೂಜಿತರಾದ ಶೈವರಿಂದಲೂ ಮುನಿಪುಂಗವರಿಂದಲೂ ಪರಿವೃತನಾಗಿ ದ್ರವಿಡರಾಜರಿಂದ ಸೇವಿಸ ಲ್ಪಟ್ಟಿರುವ ಶ್ರೇಷ್ಠವಾದ ಚೋಲದೇಶದಲ್ಲಿ ಕೆಲವು ಕಾಲವಿದ್ದು ಆಮೇಲೆ ನನ್ನ ಕೈಲಾಸಕ್ಕೆ ಬಂದು ಸೇರುವವನಾಗು ಎಂದು ಮಹೇಶ್ವರನು ಸುಂದರನಿಗೆ ಅಪ್ಪಣೆ ಮಾಡಿದನು (೧೯. ೪೯–೫೪).

ಜೈಗೀಷವ್ಯನ ಕೋರಿಕೆಯಂತೆ ಮುಂದೆ ಕುಮಾರಸ್ವಾಮಿಯು ಸುಂದರ ಭಕ್ತನ ಮಹಾಚರಿತ್ರೆಯನ್ನು ಹೇಳುವನು (೨೦. ೫–೬).

ಸುಂದರನು ಕಾವೇರಿನದಿಯ ದಡದಲ್ಲಿನ ಶಿವಕ್ಷೇತ್ರದಲ್ಲಿ ವಾಸಮಾಡುತ್ತಿರುವ ಶೈವಧರ್ಮನಿರತನಾದವನಿಗೆ ಮಗನಾಗಿ ಹುಟ್ಟಿದನು. ಮನ್ಮಥಸದೃಶನಾದ ಆ ಕುಮಾರನು ಬಾಲಸೂರ್ಯನಂತೆ ದಿನದಿನವೂ ಪುಷ್ಟನಾಗುತ್ತಿದ್ದನು. ಸರಿಯಾದ ಕಾಲದಲ್ಲೇ ತಂದೆಯಿಂದ ಉಪನಯನ ಸಂಸ್ಕಾರಹೊಂದಿದ ಆ ಬಾಲಕನು ಕ್ರಮ ವಾಗಿ ವೇದಗಳನ್ನು ಅಧ್ಯಯನ ಮಾಡಿದನು. ಯೌವನಕ್ಕೆ ಕಾಲಿಟ್ಟ ಮಗನನ್ನು ನೋಡಿ ಆ ಬ್ರಾಹ್ಮಣೋತ್ತಮನು ಬ್ರಾಹ್ಮಣಕುಲದಲ್ಲಿ ಹುಟ್ಟಿ, ಸೌಂದರ್ಯದಿಂದಲೂ ಅನುರೂಪವಾದ ವಯಸ್ಸಿನಿಂದಲೂ ಕುಲಶೀಲಗಳಿಂದಲೂ ಕೂಡಿದ ಹೆಣ್ಣನ್ನು ನೋಡಿ, ಮದುವೆಮಾಡಬೇಕೆಂದು ಯೋಚಿಸಿದನು (೨೦. ೯–೧೪). ಅದಕ್ಕಾಗಿ ಬ್ರಾಹ್ಮಣನು ಒಡವೆ ವಸ್ತುಗಳೇ ಮೊದಲಾದ ಸಾಮಾನುಗಳನ್ನು ತೆಗೆದುಕೊಂಡು ತನ್ನ ಬಂಧು ಬಾಂಧವರೊಡನೆ ಕನ್ಯಾರತ್ನವನ್ನು ಹುಡುಕಿ ಜೋಯಿಸರು ಹೇಳಿದ ಶುಭಮುಹೂರ್ತದಲ್ಲಿ ಸಂತೋಷದಿಂದ ವಿಧಿ ಪ್ರಕಾರ ಮದುವೆ ಮಾಡಬೇಕೆಂದು ಪ್ರಯತ್ನಿಸಿದನು. ಈ ಸಂದರ್ಭದಲ್ಲಿ ಶಿವನು ಮುದುಕ ಬ್ರಾಹ್ಮಣನ ವೇಷವನ್ನು ಹಾಕಿಕೊಂಡು ತನ್ನ ಕೈಯಲ್ಲಿ ಒಂದು ಕಾಗದವನ್ನು ಹಿಡಿದುಕೊಂಡು ಅವನ ತಂದೆತಾಯಿಗಳಿಗೂ ಸುಂದರನಿಗೆ ಹೆಣ್ಣುಕೊಡಲು ಬಂದಿದ್ದ ಬಂಧುಗಳಿಗೂ ಅದನ್ನು ತೋರಿಸಿ ಹೀಗೆಂದನು: ಓ ಸುಂದರನ ಬಂಧುಗಳೇ, ನೀವೆಲ್ಲರೂ ಕೇಳಿರಿ; ಬ್ರಾಹ್ಮಣ ಕುಮಾರನಾದ ಈ ಸುಂದರನು ನನ್ನಿಂದ ಸೇವಕನಾಗಿ ಸ್ವೀಕರಿಸಲ್ಪಟ್ಟಿರು ತ್ತಾನೆ. ಇಗೋ, ಈ ಪತ್ರವನ್ನು ನೋಡಿರಿ ಎಂದು ವೃದ್ಧ ಬ್ರಾಹ್ಮಣನು ಹೇಳಲು, ಆ ವಿಪ್ರವಾಕ್ಯವನ್ನು ಕೇಳಿ ಅವನ ಬಂಧುಗಳೂ ಮತ್ತು ತಂದೆತಾಯಿಗಳೂ ಸುಂದರನು ಸೇವಕನೆಂಬುದನ್ನು ಹೇಳುತ್ತಿರುವ ಅಸದೃಶವಾದ ಆ ಪತ್ರವನ್ನು ನೋಡಿ ನಾಚಿಕೆಯಿಂದ ತಲೆಬಾಗಿ, ತಂದೆತಾಯಿಗಳೂ ಮತ್ತು ಬಾಂಧವರೂ ಆ

ಸುಂದರನನ್ನು ಕುರಿತು ಎಲೈ ಸುಂದರನೇ, ಯಾವಾಗಲೂ ಈ ಬ್ರಾಹ್ಮಣ ನನ್ನು ಹಿಂಬಾಲಿಸಿ ಅವನು ಹೇಳಿದಂತೆ ನೀನು ನಡೆಯಬೇಕು. ಇವನೇ ನಿನಗೆ ಶರಣನೆಂದು ಈ ಪತ್ರದಲ್ಲಿ ಬರೆದಿರುವುದು. ಇದನ್ನು ನೋಡು, ನಿನಗೆ ತಿಳಿಯುವುದು ಎಂದು ಹೇಳಿದರು. ಹೀಗೆ ಆ ಬಂಧುಗಳ ಮಾತನ್ನು ನಡೆಸುತ್ತಾ ಸುಂದರನು ವೃದ್ಧ ಬ್ರಾಹ್ಮಣನೊಡನೆ ಹೊರಟನು. ಆ ಬ್ರಾಹ್ಮಣನಾದರೋ ಸುಂದರನನ್ನು ಕರೆದುಕೊಂಡು ತನಗೆ ಇಷ್ಟವಾದ ದಿಕ್ಕಿಗೆ ಹೊರಟುಹೋದನು. ಅವನ ಬಂಧುಗಳೂ ಮತ್ತು ತಂದೆತಾಯಿಗಳೂ ದುಃಖದಿಂದ ವ್ಯಾಕುಲಗೊಂಡ ಮನಸ್ಸುಳ್ಳವರಾಗಿ ಅದೃಷ್ಟ ಘಟನೆಯನ್ನು ಯೋಚಿಸುತ್ತಾ ತಮ್ಮ ತಮ್ಮ ಮನೆಗೆ ಹಿಂತಿರುಗಿದರು. ಆ ಸುಂದರನೂ ವೃದ್ಧಬ್ರಾಹ್ಮಣನ ಹಿಂದೆಯೇ ಹೊರಟು ಒಂದು ಶಿವದೇವಾಲಯಕ್ಕೆ ಹೋದನು. ಅಲ್ಲಿ ಆ ಮುದುಕನು ಅಲ್ಲಿದ್ದ ಮನೋಹರವಾದ ಶಿವಲಿಂಗಕ್ಕೆ ಐಕ್ಯವಾಗಿ ಹೋದನು. ಆಗ ಅದನ್ನು ನೋಡಿ ಸುಂದರನು ಆಶ್ಚರ್ಯಚಕಿತನಾಗಿ ಚಂದ್ರಶೇಖರನನ್ನು ಸ್ತೋತ್ರಮಾಡಿದನು (೨೦. ೧೦-೨೫). ಸುಂದರನ ಸ್ತೋತ್ರಕ್ಕೆ ಮೆಚ್ಚಿದ ಶಿವ ಅಲ್ಲಿಯೇ ಪ್ರತ್ಯಕ್ಷನಾದನು (೨೦-೨೬). ಪರಮೇಶ್ವರನ ರೂಪವನ್ನು ತನ್ನ ಎರಡು ಕಣ್ಣುಗಳಿಂದಲೂ ನೋಡಿದ ಸುಂದರನು ಅವನ ಪಾದಗಳಿಗೆ ನಮಿಸಿದನು. ಆ ದಿವ್ಯ ರೂಪವನ್ನು ಕಂಡ ಸುಂದರನು ಭಕ್ತಿಪರವಶನಾಗಿ ನರ್ತನಮಾಡಿ ನಾನಾರೀತಿ ಸ್ತೋತ್ರ ಮಾಡಿದನು (೨೦-೩೭). ಆ ಸ್ತೋತ್ರವನ್ನು ಕೇಳಿ ಸಂತುಷ್ಟನಾದ ಪರಶಿವನು "ಉತ್ತಮವಾದ ರಾಜ್ಯದಿಂದ ನಿನಗೇನು? ಆ ನಿನ್ನ ಪ್ರಿಯಳಾದ ಕಮಲಿನಿಯೂ ಕಮಲಾಲಯಕ್ಷೇತ್ರ ಮಧ್ಯದಲ್ಲಿ ಲಕ್ಷ್ಮಿಯಂತೆಯೂ ಸರಸ್ಸಿನಲ್ಲಿರುವ ಕಮಲ ದಂತೆಯೂ ಆವಿರ್ಭವಿಸಿರುವಳು. ಸುಂದರನೇ, ಅಲ್ಲಿಗೆ ಬಾ. ಅವಳೊಡನೆ ನಿನಗೆ ನಾನೇ ವಿವಾಹಮಾಡಿಸುತ್ತೇನೆ. ಆ ಬಳಿಕ ನನ್ನ ನಾಮರೂಪವಾದ ಪದಗಳನ್ನು ಜೋಡಿಸಿ ನನ್ನನ್ನು ಸ್ತುತಿಸು" ಎಂದು ಶ್ರೀಕಂಠೇಶ್ವರನು ನುಡಿಯಲು ಶಿವನ ಅಪ್ಪಣೆಯಂತೆ ಸುಂದರನು ಅನೇಕ ಗೀತೆಗಳನ್ನು ಹಾಡಿ ರಚಿಸಿದನು (೨೦. ೪೩-೪೭). ತನ್ನ ಸ್ತೋತ್ರಗಳಿಂದ ಸುಂದರನು ಶಂಭುವಿಗೆ ಕರ್ಣಾನಂದವನ್ನುಂಟುಮಾಡು ತ್ತಿರಲು, ಆಕಾಶದಿಂದ ದೇವತೆಗಳು ದಿವ್ಯವಾದ ಹೂಮಳೆಗರೆದರು. ಅಪ್ಸರ ಸ್ತ್ರೀಯರ ಗುಂಪು ಆಕಾಶದಲ್ಲಿ ನಾಟ್ಯವಾಡಿತು. ಪುನಃ ಆ ದೇವತೋತ್ತಮನು ವಿನಯದಿಂದ ತಲೆಬಾಗಿ ನಮಸ್ಕರಿಸಿದ ಸುಂದರನಿಗೆ ತನ್ನ ದಿವ್ಯ ಸ್ಥಾನಗಳನ್ನು ಉಪದೇಶಮಾಡಿ ತನ್ನ ಗಣಗಳು ಮತ್ತು ದೇವಿಯೊಡನೆ ಕಣ್ಮರೆಯಾದನು (೨೦. ೪೯, ೫೦, ೫೮).

ಮಹಾದೇವನಿಂದ ಆಜ್ಞಪ್ತನಾದ ಸುಂದರನು ಕಾಲಹಸ್ತಿ, ಕಂಚಿ, ಅರುಣಾ ಚಲ, ವೃದ್ಧಾಚಲ, ವೃಷಭಾಚಲ—ಈ ಪವಿತ್ರಕ್ಷೇತ್ರಗಳಲ್ಲೆಲ್ಲಾ ಸಂಚರಿಸಿ, ಶಿವನನ್ನು ಸ್ತುತಿಸಿ ಮುಂದೆ ಕಮಲಾವಿಲಾಸಮಂದಿರಕ್ಕೆ ಪ್ರಯಾಣಮಾಡಿದನು

(೨೧). ಕಮಲಾಲಯಕ್ಷೇತ್ರಕ್ಕೆ ಬಂದ ಸುಂದರನು ಅಲ್ಲಿದ್ದ ದೇವೇಶನ ಸರಸ್ಸಿನಲ್ಲಿ ಸ್ನಾನಮಾಡಿ ಭಸ್ಮ ರುದ್ರಾಕ್ಷಿಗಳಿಂದ ಅಲಂಕರಿಸಿಕೊಂಡು ಆನಂದೇಶ್ವರ, ಆದಿಸಿದ್ಧೇಶ್ವರ, ಅಚಲೇಶ್ವರ, ಹಾಟಕೇಶ್ವರ ಮತ್ತು ವಲ್ಮೀಕೇಶ್ವರರೆಂಬ ಐದು ಲಿಂಗಗಳಿಗೂ ವಂದಿಸಿ ಕ್ರಮವಾಗಿ ಪಂಚಲಿಂಗಗಳನ್ನೂ ಸ್ತೋತ್ರ ಮಾಡಿದನು (೨೨. ೧-೪). ಆಗ ಶಿವನು ಪ್ರಸನ್ನನಾಗಿ ಸುಂದರನನ್ನು ನೋಡಿ ಅಯ್ಯಾ ಸುಂದರನೇ, ಸಮೀಪಕ್ಕೆ ಬಾ. ನಿನಗೆ ಮಂಗಳವಾಗಲಿ. ಭಕ್ತಿಯಲ್ಲಿ ನೀನು ನಿಜವಾಗಿಯೂ ಸುಂದರನೇ ಸರಿ. ನನ್ನ ಸೇವಾವೃತ್ತಿಯಲ್ಲಿ ನಿಯುಕ್ತನಾಗಿದ್ದ ನೀನು ಈಗ ನನ್ನ ಭಕ್ತನಾಗಿರುವೆ. ಇನ್ನುನೀನು ನಿರ್ಮಲ ವಾದ ಮೋಕ್ಷವನ್ನು ಕೊಡುವ ಈ ಕಮಲಾಲಯಕ್ಷೇತ್ರದಲ್ಲಿ ವಾಸಮಾಡು. ನಿತ್ಯವೂ ದೇವತೀರ್ಥದಲ್ಲಿ ಸ್ನಾನ ಮಾಡಿ, ಭಸ್ಮರುದ್ರಾಕ್ಷಗಳನ್ನಲಂಕರಿಸಿ ಕೊಂಡು, ಸಕಲ ಇಷ್ಟಾರ್ಥಗಳನ್ನೂ ಕೊಡುವ ಈ ಕ್ಷೇತ್ರದಲ್ಲಿ ಭಕ್ತಿಯಿಂದ ನಿಯಮಪೂರ್ವಕವಾಗಿ ವಾಸಿಸು. ಭಕ್ತಿಯಿಂದ ಯಾವಾಗಲೂ ನನ್ನ ದರ್ಶನ ಮಾಡುತ್ತಿರು. ನೀನು ನಿತ್ಯಮುಕ್ತನೆನಿಸುವೆ, ಕೊನೆಗೆ ಈ ಶರೀರಸಹಿತವಾಗಿಯೇ ನನ್ನ ದೇಹದಲ್ಲಿ ಐಕ್ಯವನ್ನು ಪಡೆಯುತ್ತೀಯೆ. ಎಲೈ ಸುಂದರನೇ, ಹಿಂದೆ ನಿನ್ನಿಂದ ನೋಡಲ್ಪಟ್ಟ ತರುಣಿಯಾದ ಕಮಲಿನಿಯು ಭಕ್ತಿಯಿಂದ ನನ್ನನ್ನು ಧ್ಯಾನಿಸಿ, ಈಗ ನನ್ನ ಅನುಗ್ರಹಕ್ಕೆ ಪಾತ್ರಳಾಗಿ ನನ್ನ ಅಪ್ಪಣೆಯಿಂದ ವೇಶ್ಯೆಯರ ಕುಲಕ್ಕೆ ಅಂಕುರಪ್ರಾಯಳಾಗಿ ಅವತರಿಸುವಳು. ಎಲೈ ಗಣಮುಖ್ಯನೇ, ಈಗ ಅವಳೊಡನೆ ನಿನಗೆ ಪಾಣಿಗ್ರಹಣವನ್ನು ಮಾಡಿಸುವೆನು. ವಿವಾಹದೀಕ್ಷಿತನಾದ ನಿನ್ನನ್ನು ಪ್ರತಿದಿನವೂ ನೋಡುತ್ತೇನೆ. ಎಲೈ ಸುಂದರನೇ, ನಾನು ಹೇಳಿದಂತೆ ನಡೆಸು ಎಂದು ಮಹೇಶ್ವರನು ಸುಂದರನಿಗೆ ಅಪ್ಪಣೆಮಾಡಿದನು (೨೨. ೩೪-೩೯).

ಕಮಲಾಲಯಕ್ಕೆ ಪೂರ್ವದಿಕ್ಕಿನಲ್ಲಿರುವ ಒಂದು ಪಟ್ಟಣದಲ್ಲಿ ಶೃಂಗಾರ ನಾಯಿಕೆಯೆಂಬ ಪ್ರಖ್ಯಾತಳಾದ ಚಂದ್ರಗಣಿಕೆ (ವೇಶ್ಯೆ)ಯೊಬ್ಬಳು ಇದ್ದಳು. ಇವಳು ಸೌಂದರ್ಯವೆಂಬ ಅಮೃತಕ್ಕೆ ಎಲ್ಲೆಯಂತಿದ್ದು ಅತಿಸುಂದರಿಯೆನಿಸಿದ್ದಳು (೨೪. ೨-೩). ಅವಳು ಪುತ್ರೀರತ್ನವನ್ನು ಪಡೆಯಬೇಕೆಂದು ಉತ್ಸಾಹದಿಂದ ವಲ್ಮೀಕರಂಧ್ರೇಶನನ್ನು ಪೂಜೆಮಾಡಿದಳು. ಅದಕ್ಕಾಗಿ ಅನೇಕ ಶೈವಶ್ರೇಷ್ಠರನ್ನು ಸತ್ಕರಿಸಿದಳು. ಅಲ್ಲದೆ ಪಾರ್ವತೀದೇವಿಯ ಪ್ರೀತಿಗೋಸ್ಕರ ಮನೋಹರವಾದ ಅರಿಸಿನ, ಕುಂಕುಮ, ಬಟ್ಟೆಬರೆಗಳೇ ಮೊದಲಾದವುಗಳಿಂದ ಕನ್ಯೆಯರನ್ನು ಪೂಜೆ ಮಾಡಿದಳು. ಅನಂತರ ರೇಷ್ಮೆಯ ಬಟ್ಟೆ, ಹಾರ, ಕುಂಕುಮ ಮತ್ತು ಒಡವೆಗಳಿಂದ ಗೌರೀದೇವಿಯನ್ನೂ ಪೂಜಿಸಿದಳು. ಈ ಶೃಂಗಾರನಾಯಿಕೆಯ ಅನೇಕ ಬಾರಿಯ ಅಂತಹ ಪೂಜೆಗಳಿಂದ ಸಂತುಷ್ಟರಾಗಿ, ಇವಳ ಮನೋಭಿಪ್ರಾಯವನ್ನರಿತ ಪಾರ್ವತೀಪರಮೇಶ್ವರರು ಅವಳನ್ನು ಅನುಗ್ರಹಿಸಿ, ನಿನಗೆ ಸತ್ಪುತ್ರಿಯು ಜನಿಸಲೆಂದು

ವರವನ್ನು ಕೊಟ್ಟರು. ಶಿವನ ಅರ್ಧಾಂಗಿಯಾದ ಪಾರ್ವತಿಯು ಪರಿಚಾರಿಕೆಯೆನಿಸಿದ ಕಮಲಿನಿಯು ಆ ಶೃಂಗಾರನಾಯಿಕೆಯ ಹೊಟ್ಟೆಯಲ್ಲಿ ಅವತರಿಸಿದಳು. ಶೃಂಗಾರ ನಾಯಿಕೆಯು ಶಿವಾನುಗ್ರಹದಿಂದ ಮಗಳನ್ನು ಪಡೆದು ತನ್ನ ಮಗಳು ಕಾಂತಿ, ಶೃಂಗಾರ ಇವುಗಳ ಪ್ರವಾಹದಂತಿರುವುದನ್ನು ನೋಡಿ ಇವಳಿಗೆ 'ಸಾಗರಿಕಾ' ಎಂದು ಹೆಸರಿಟ್ಟಳು. ಈ ಸಾಗರಿಕೆಯು ಆನಂದಪ್ರದವಾದ ತಾಯಿಯ ಆಕೃತಿಯನ್ನೇ ಮುಖ್ಯ ಗುರಿಯನ್ನಾಗಿಟ್ಟುಕೊಂಡಿರುವಳೋ ಎಂಬಂತೆ ಹಿತಕರವಾದ ನೋಟ ದಿಂದ ಸೌಂದರ್ಯಕ್ಕೆ ಬೀಡಾಗಿರುವ ತನ್ನ ದೇಹವನ್ನು ಪುಷ್ಟಿಗೊಳಿಸಿಕೊಂಡಳು. ಇವಳೇನು ಸುಂದರಿಯಾದ ತರುಣಿಯೋ! ರಸಭರಿತವಾದ ಜೇನೋ! ಅಥವಾ ಪಾಡ್ಯಮಿಯ ಚಂದ್ರಲೇಖೆಯೋ! ಅಲ್ಲವೇ ಆನಂದದಂಕುರವೋ! ಒಂದು ವೇಳೆ ಯಾವುದೇ ಕಾರಣದಿಂದ ಈ ಕಮಲಾಲಯದಲ್ಲಿ ಅವತರಿಸಿರುವ ಸಾಕ್ಷಾಲ್ಲಕ್ಷ್ಮೀ ದೇವಿಯೋ ಏನೋ! ಎಂಬುದಾಗಿ ವೇಶ್ಯೆಯರು ಆ ಸಾಗರಿಕೆಯ ಸೌಂದರ್ಯ ವನ್ನು ನೋಡಿ ತಮ್ಮ ತಮ್ಮಲ್ಲಿಯೇ ಪರಸ್ಪರವಾಗಿ ಹೀಗೆ ಮಾತನಾಡಿಕೊಂಡರು (೨೪. ೪-೧೧).

ಒಂದು ದಿನ ಆ ಸಾಗರಿಕೆಯು ವಲ್ಮೀಕೇಶ್ವರನಾದ ಶಿವನಿಗೆ ನಮಸ್ಕಾರಮಾಡ ಬೇಕೆಂದು ಉತ್ಸಾಹಭರಿತಳಾಗಿ ತನ್ನ ಮನೆಯಿಂದ ಹೊರಹೊರಟಳು. ಅವಳು ಹೀಗೆ ಸಮಾನವಾದ ಸೌಂದರ್ಯ ಮತ್ತು ವಯಸ್ಸುಗಳಿಂದ ಶೋಭಿಸುವ ತನ್ನ ಗೆಳತಿಯರೊಂದಿಗೆ ಹೋಗುತ್ತಿದ್ದರೆ, ಮೂರ್ತಿಮತ್ತಾಗಿ ಮನ್ಮಥನ ಹೆಂಡತಿಯಾದ ರತಿಯು ಶಕ್ತಿಯುತವಾದ ತನ್ನ ಸೈನ್ಯ ಸಮೇತಳಾಗಿ ತನ್ನ ಸ್ವಾಮಿಯ ಅಪ್ಪಣೆ ಯಂತೆ ಬರುತ್ತಿರುವಳೋ ಎಂಬಂತೆ ಪ್ರಕಾಶಿಸುತ್ತಿದ್ದಳು. ಸಾಗರಿಕೆಯು ಮಹಾ ದೇವನ ಶ್ರೀಮಂಟಪದ ಹತ್ತಿರಕ್ಕೆ ಬಂದ ಸಮಯದಲ್ಲೇ ಸುಂದರನಾಥನು ಸಹ ವಲ್ಮೀಕೇಶ್ವರನಿಗೆ ವಂದಿಸಲು ಅಲ್ಲಿಗೆ ಬಂದನು. ಅದೇ ಮಾರ್ಗದಲ್ಲಿ ಬಂದ ಮನ್ಮಥನ ಇಂದ್ರಜಾಲಾಸ್ತ್ರದ ಮಾಯೆಯನ್ನೊಳಗೊಂಡ ನವಿಲುಗರಿಯ ಕಂತೆ ಯಂತಿರುವ ಕೃಶಾಂಗಿಯಾದ ಆ ಸಾಗರಿಕೆಯನ್ನು ನೋಡಿ ಸುಂದರನ ಮನಸ್ಸು ಕದಡಿತು. ಇದೇನಾಶ್ಚರ್ಯ! ಮನಸ್ಸಿನಲ್ಲಿ ಒಡೆಯನಾದ ಪರಶಿವನು ಇದ್ದಾಗ್ಯೂ ಶಂಭುವಿನ ಸಖನಾದ ಸುಂದರನು ಅದನ್ನು ತಿಳಿಯಲಾರದೇ ಹೋದನಲ್ಲಾ ಎಂದು ಯೋಚಿಸುತ್ತಾ, ಮತ್ತೆ ಪರಮೇಶ್ವರನ ಭಕ್ತಿರಸದಲ್ಲಿ ಆಸಕ್ತನಾಗಿ ಮನಸ್ಸನ್ನು ನಿಗ್ರಹಿಸಲು ಯತ್ನಿಸಿದನು (೨೪. ೧೬-೧೭, ೨೨-೨೪).

ಇತ್ತ ಆ ಸಾಗರಿಕೆಯೂ ಸುಂದರನನ್ನು ನೋಡಿ ಅವನ ಸೌಂದರ್ಯ ವೆಂಬ ದೊಡ್ಡ ಪ್ರವಾಹದಲ್ಲಿ ಸಿಲುಕಿದ ದೃಷ್ಟಿಯುಳ್ಳವಳಾದಳು. ಆಗ ಅವಳೂ ಈ ಕುಮಾರನಾರು? ಸೌಂದರ್ಯವೆಂಬ ಅಮೃತಕ್ಕೆ ಸಾಗರನಾಗಿರುವ (ಆಶ್ರಯ

ನಾಗಿರುವ) ಮನ್ಮಥನೇ ಆಗಿರಬಹುದೆ! ಇದೇನಾಶ್ಚರ್ಯ! ನನ್ನ ಮನಸ್ಸನ್ನೂ ಹೀಗೆ ತನ್ನ ಕಡೆಗೆ ಸೆಳೆದುಕೊಂಡು ಹೋಗುತ್ತಿರುವನಲ್ಲಾ! ಎಂದು ಮುಂತಾಗಿ ಯೋಚಿಸುತ್ತಾ ವಲ್ಮೀಕೇಶ್ವರನನ್ನು ವಂದಿಸಲು ಹೊರಟಳು. ಹೀಗೆ ಪರಿವಾರ ದೊಡನೆ ಹೋಗುತ್ತಿರುವ ಅವಳನ್ನು ನೋಡಿ ಸುಂದರನು ಅಲ್ಲಿಯೇ ಸಂಚರಿಸುತ್ತಿದ್ದ ಜನಗಳನ್ನು ಕುರಿತು ಕಾಂತಿಗೆ ನೆಲೆವೀಡಾಗಿರುವ ಇವಳಾರೆಂದು ಪ್ರಶ್ನಿಮಾಡಲು, ಆ ಜನಗಳು ಇವಳು ಸಾಗರಿಕೆಯೆಂಬುವಳೆಂದು ತಿಳಿಸಿದರು. ಆಗ ಸುಂದರನು ಅವಳನ್ನೇ ದೃಷ್ಟಿಸಿ ನೋಡುತ್ತಾ ವಲ್ಮೀಕರಂಧ್ರೇಶ್ವರನಿಗೆ ನಮಸ್ಕಾರಮಾಡಲು ತಾನೂ ಹೊರಟನು. ಆ ಸಾಗರಿಕೆಯೂ ವಲ್ಮೀಕೇಶ್ವರನಿಗೆ ನಮಸ್ಕರಿಸಿ, ಪದೇಪದೇ ಪ್ರದಕ್ಷಿಣೆ ಮಾಡಿ ಒಂದು ಬಾಗಿಲಿನಿಂದ ಹೊರಹೊರಟಳು. ಆ ಸುಂದರನೂ ಈಶ್ವರನಿಗೆ ನಮಸ್ಕಾರಮಾಡಿ 'ಆ ಸಾಗರಿಕೆಯೇ ನನಗೆ ಪ್ರಿಯೆ ಯಾಗಲಿ' ಎಂದು ಪ್ರಾರ್ಥಿಸಿ ಪುನಃ ಆ ದೇವೇಶನಿಗೆ ಪ್ರಣಾಮ ಮಾಡಿದನು. ಸುಂದರನು ಈ ರೀತಿಯಲ್ಲಿ ವಲ್ಮೀಕೇಶ್ವರನಿಗೆ ನಮಸ್ಕಾರಮಾಡಿ, ಆ ಕಮಲಾಲಯದ ಶಿವಲಿಂಗವನ್ನು ಸ್ತುತಿಸಿ, ಮನಸ್ಸಿನಲ್ಲಿ ಶುಭಕರಳಾದ ಆ ಸಾಗರಿಕೆಯನ್ನೇ ಚಿಂತಿಸುತ್ತಾ ಅಲ್ಲಿಂದ ಹೊರಟನು. ಸುಂದರನು ಆ ಸಾಗರಿಕೆಯಿಂದುಂಟಾದ ಕಾಮವಿಕಾರವನ್ನು ಸಹಿಸಲು ಸಾಧ್ಯವಿಲ್ಲದೇ ಅವಳನ್ನು ಹುಡುಕಲು ಉತ್ಸಾಹದಿಂದ ಮಹಾದೇವನ ಆಶ್ರಮಕ್ಕೆ ಹೋದನು (ಅ. ೨೫, ೨೬, ೨೭, ೨೮, ೨೯, ೩೦, ೩೧, ೩೭). ಮನ್ಮಥವಿಕಾರಕ್ಕೀಡಾದ ಸುಂದರೇಶ್ವರನು ಬುದ್ಧಿಮಾಂದ್ಯವುಳ್ಳವನಾದನು. ಮೃದುಸ್ವಭಾವದವಳಾದ ಸಾಗರಿಕೆಯೂ ಆ ಸುಂದರನ ಧ್ಯಾನದಿಂದಲೇ ಪ್ರಜ್ಞಾ ಶೂನ್ಯಳಾಗಿ ಒಂದು ಎತ್ತರವಾದ ಉಪ್ಪರಿಗೆಯನ್ನೇರಿದಳು. ಸಾಗರಿಕೆ ತನ್ನ ಸೇವಕಿಯೋರ್ವಳನ್ನು ಬಳಿಕರೆದು ಅತಿ ರಹಸ್ಯವಾಗಿ ತನ್ನ ಅಂತರಂಗದ ಬೇಗೆ ಯನ್ನು ತೋಡಿಕೊಂಡಳು. ಸಖಿಯು ಸಾಗರಿಕೆಗೆ 'ನಿನ್ನ ಮನಸ್ಸನ್ನು ಸೂರೆ ಗೊಂಡಿರುವವನು ಸುಂದರನೆಂದೂ ಅವನು ಶಂಕರನ ನಿಜವಾದ ಭಕ್ತನೆಂದೂ ಅವನು ಶಿವನಿಂದ ಬಲಾತ್ಕಾರವಾಗಿ ಸೇವಕನಾಗಿ ಮಾಡಲ್ಪಟ್ಟಿದ್ದಾನೆ' ಎಂದೂ ಹೇಳಿದಳು. ಮನ್ಮಥ ಪೀಡಿತಳಾದ ಸಾಗರಿಕೆಯು ಅನೇಕ ಶೈತ್ಯೋಪಚಾರವನ್ನು ಪಡೆದಾಗ್ಯೂ ಹೆಚ್ಚಿನ ಪರಿತಾಪ ಹೊಂದಿದಳು (ಅ. ೪೧, ೪೫, ೪೬, ೪೭, ೪೮, ೪೯).

ವಿರಹಿತರಾದ ಸುಂದರ ಸಾಗರಿಕೆಯರಿಬ್ಬರೂ ಮನ್ಮಥಾವಸ್ಥೆಯಿಂದ ರಾತ್ರಿಯ ಮೂರು ಜಾವವೂ ಬಳಲಿದರು. ನಾಲ್ಕನೆಯ ಜಾವದಲ್ಲಿ ಅವರಿಬ್ಬರೂ ಕ್ಷಣಕಾಲ ನಿದ್ರಾಸುಖವನ್ನು ಪಡೆಯುತ್ತಿದ್ದಾಗ ಅವರಿಬ್ಬರಿಗೂ ಕನಸಿನಲ್ಲಿ ಪರಶಿವನು ಕಾಣಿಸಿಕೊಂಡು 'ನಿಮ್ಮಿಬ್ಬರಿಗೂ ವಿವಾಹವಾಗಲಿ' ಎಂದು ಹೇಳಿದಂತಾಯಿತು. ಅಲ್ಲದೆ, ಈ ಸಾಗರಿಕೆಯೆಂಬ ಕನ್ಯೆಯನ್ನು ನನ್ನ ಭಕ್ತನೂ ಮಹಾತ್ಮನೂ ಆದ

ಸುಂದರೇಶನಿಗೆ ಕೊಟ್ಟು ವಿವಾಹಮಾಡಬೇಕೆಂದು ಆ ಪಟ್ಟಣದ ಜನಗಳಿಗೂ ಕನಸಿನಲ್ಲಿ ಹೇಳಿದಂತಾಯಿತು. ಸೂರ್ಯೋದಯವಾಯಿತು. ಸುಂದರ ನಾಗರಿಕೆಯರಿಗೆ ಕೂಡಲೇ ವಿರಹವೆಂಬ ಅಂಧಕಾರವು ತೊಲಗಿತು (೨೪. ೫೫-೬೦). ಬೆಳಗಾದ ಮೇಲೆ ಪಟ್ಟಣಿಗರೆಲ್ಲರಿಗೂ ಶಿವನಿಂದ ಆಜ್ಞಾಪಿಸಲ್ಪಟ್ಟ ಕನಸಿನ ಅಭಿಪ್ರಾಯವನ್ನು ತಿಳಿದು ಪ್ರಸಿದ್ಧರಾದ ಜ್ಯೋತಿಷ್ಯರಿಂದ ನಿಷ್ಕರ್ಷಿಸಲ್ಪಟ್ಟ ಒಳ್ಳೆಯ ಮುಹೂರ್ತದಲ್ಲಿ ಆ ನಾಗರಿಕೆ ಮತ್ತು ಸುಂದರೇಶರಿಗೆ ಅತ್ಯಂತ ವೈಭವದಿಂದ ವಿವಾಹಕರ್ಮವನ್ನು ನೆರವೇರಿಸಿದರು (೨೪. ೬೧-೬೨).

ಸುಂದರನು ನಾಗರಿಕೆಯೊಡನೆ ವಿಷಯಭೋಗಗಳನ್ನು ಅನುಭವಿಸುತ್ತಾ ಪ್ರತಿದಿನವೂ ಪರಶಿವನನ್ನು ಮನಸಾ ಸ್ತೋತ್ರಮಾಡುತ್ತಾ ಮನಸ್ಸಿನಲ್ಲಿ ಆ ಪರಶಿವನ ಪಾದಕಮಲಗಳನ್ನರಿಸಿಕೊಂಡು ಸುಖವಾಗಿ ಸಂಚರಿಸಿದನು. ಒಂದು ದಿನ ಪರಶಿವನಿಗೆ ಭಕ್ತಿಯಿಂದ ನಮಸ್ಕಾರಮಾಡಲು ತನ್ನ ಭಕ್ತರೊಡನೆ ಮನಸ್ಸು ಮಾಡಿದನು. ದೇವತೆಗಳಿಗೂ ಮಾನನೀಯನಾದ ಸುಂದರನು ಹೊಸಬಟ್ಟೆಯನ್ನು ಧರಿಸಿ ಕುಂಕುಮ ಚಂದನರಸಗಳಿಂದ ಲೇಪಿತನಾಗಿ ಕಲ್ಹಾರ ಪುಷ್ಪವನ್ನು ತಲೆಯಲ್ಲಿ ಅಲಂಕರಿಸಿಕೊಂಡು ಕೈಯಲ್ಲಿ ಚಿನ್ನದ ಬೆತ್ತವನ್ನು ಹಿಡಿದು ಹಣೆಯಲ್ಲಿ ಸ್ಫುಟವಾಗಿರುವ ಭಸ್ಮತ್ರಿಪುಂಡ್ರಾಂಕಿತನಾಗಿ, ಅಲುಗಾಡುತ್ತಿರುವ ಚಿನ್ನದ ಕರ್ಣಾಭರಣವುಳ್ಳವನಾಗಿ, ವಕ್ಷಸ್ಥಳದಲ್ಲಿ ಸತ್ವರಜಸ್ತಮೋಗುಣಗಳೆಂಬ (ಮೂರು) ತ್ರಿವಳಿಗಳಿಂದ ಶೋಭಿಸುತ್ತಾ, ಕಮಲಾಲಯಕ್ಕೆ ಮಂಗಳವನ್ನುಂಟುಮಾಡುವ ಆ ಸುಂದರೇಶನು ಆಪ್ತರಾದ ಭಕ್ತರೊಡನೆ ಎಲ್ಲರಿಂದಲೂ ಶ್ಲಾಘಿಸಲ್ಪಡುವ ಮಹಿಮೆಯುಳ್ಳವನಾಗಿ ತನ್ನ ಮನೆಯಿಂದ ಹೊರಟನು. ಗೌರವಪೂರ್ವಕವಾಗಿ, ದಾಸದಾಸಿಯರಿಂದಲೂ ಬ್ರಾಹ್ಮಣರೊಡನೆಯೂ ಹೊರಹೊರಟ ಆ ನಾಗರಿಕಾರಮಣನಾದ ಆ ಸುಂದರನನ್ನು ಜನಗಳು ಹೊಗಳುತ್ತಾ ನಮಸ್ಕಾರ ಮಾಡುತ್ತಿದ್ದರು. ಸುಂದರನು ಪ್ರಯಾಣ ಮಾಡುವಾಗ ಮಾರ್ಗಮಧ್ಯದಲ್ಲಿ ಅಲ್ಲಲ್ಲೇ ನಿಂತುಕೊಂಡು ಜನಗಳ ಕೋಲಾಹಲವನ್ನು ಕೇಳುತ್ತಾ ಕಪಿ, ಕೋಳಿ, ಆಡುಗಳ ಕಾಳಗಗಳನ್ನು ಉತ್ಸಾಹದಿಂದ ಅವಲೋಕನ ಮಾಡುತ್ತಾ ಮುಂದುವರಿಯುತ್ತಿದ್ದನು. ಒಂದೊಂದು ಸಾರಿ ತಾಂಬೂಲವನ್ನು ಹಾಕಿಕೊಳ್ಳುತ್ತಲೂ ಛತ್ರಿ ಚಾಮರ ಮುಂತಾದವುಗಳಿಂದ ಪರಿವೃತನಾಗಿ, ಉತ್ತಮವಾದ ಕುದುರೆಯ ಮೇಲೆ ಹಾಕಿರುವ ಚಿನ್ನದಬಣ್ಣದ ಜೀನಿನಮೇಲೆ ಮಂಡಿಸಿ ತನ್ನ ಮುಂದುಗಡೆ ಪದೇಪದೇ ಜಯಧ್ವನಿ ಮಾಡುತ್ತಾ ಎಲ್ಲೆಡೆಗಳಲ್ಲಿಯೂ ವ್ಯಾಪಿಸಿದ ಕೋಲಾಹಲಧ್ವನಿಯುಳ್ಳವನಾಗಿ ತನ್ನ ದೇಹಕಾಂತಿಯಿಂದ ಸುಂದರಿಯರಿಗೆಲ್ಲಾ ನೇತ್ರಾನಂದವನ್ನುಂಟುಮಾಡುತ್ತಾ, ಸುತ್ತಲೂ ಜನಗಳಿಂದ ಪರಿವೃತನಾಗಿ ಆ ಶಂಭುವಿನ ಶ್ರೀಗೋಪುರಕ್ಕೆ ಪ್ರಯಾಣ ಮಾಡಿದನು (೨೪. ೬೩-೭೪).

ಅಲ್ಲಿ ಪರಮೇಶ್ವರನಿಗೆ ನಮಸ್ಕಾರಮಾಡಿ, ಆ ಭಕ್ತನು ಮಹಾದೇವನ ತೇಜಸ್ಸಿನಿಂದ ಶೋಭಿಸುತ್ತಿದ್ದ ತತ್ಸಮಾನರಾದ ಭಕ್ತರನ್ನೆಲ್ಲಾ ಪುನಃ ಪುನಃ ವಂದಿಸಿ, ಯಾವಾಗ ನಾನು ಇವರಿಗೆ ಸೇವಕನಾಗುತ್ತೇನೋ, ಮಹಾದೇವನ ಭಕ್ತ ರೆನಿಸಿದ ಶೈವವರ್ಯರ ಸೇವೆ ಎಂದು ನನಗೆ ಲಭಿಸುವುದೋ ಎಂದು ಚಿಂತಿಸುತ್ತಾ ಗರ್ಭಗುಡಿಯ ಬಾಗಿಲಿಗೆ ಬಂದು ಶಿವಲಿಂಗಕ್ಕೆ ವಂದಿಸಿ ಶಂಭುವಿನ ಗರ್ಭಗುಡಿಯ ಒಳಗೆ ಹೋಗಿ ಚಂದ್ರಶೇಖರನನ್ನು ನೋಡಿ ಆನಂದಬಾಷ್ಪದಿಂದ ರೋಮಾಂಚಿತ ನಾಗಿ ಪ್ರಭುವಿನ ಪಾದಗಳಿಗೆ ಮತ್ತೆ ಮತ್ತೆ ನಮಿಸಿ ಸ್ತೋತ್ರಮಾಡಿದನು. ಅದರಿಂದ ಸುಪ್ರೀತನಾದ ಶಿವನು ಸುಂದರನ ಅಂತರಂಗವನ್ನು ತಿಳಿದು, ಎಲೈ ಸುಂದರನೇ! ಈಗ ನಿನ್ನ ಇಷ್ಟಾರ್ಥವನ್ನು ಪೂರ್ಣಗೊಳಿಸುವೆನು. ನೀನು ನನ್ನ ಭಕ್ತರಿಗೆ ಸೇವಕ ನಾಗು; ಇವರೆಲ್ಲರೂ ನನ್ನನ್ನು ಧ್ಯಾನಮಾಡಿ ನನಗೆ ಸಮಾನವಾದ ರೂಪವನ್ನೇ ಹೊಂದಿ, ಅನನ್ಯಮನಸ್ಕರಾಗಿರುವರು. ಯಾವ ನ್ಯೂನತೆ ದೋಷಾದಿಗಳೂ ಇಲ್ಲದೆ ನನ್ನ ಧ್ಯಾನದಿಂದ ಸುಖಿಗಳಾಗಿ ಶೋಭಿಸುತ್ತಿರುವರು. ಈ ರೀತಿ ಸಂಚರಿಸುವವರಿಗೆ ನಾನು ಸ್ತೋತ್ರಯೋಗ್ಯವಾದ ಜ್ಞಾನವನ್ನೇ ರಕ್ಷಣೆಯಾಗಿ ಅನುಗ್ರಹಿಸಿರುವೆನು. ನೀನೇ ಭಕ್ತರ ಪರಂಪರೆಗೆ ಆಶ್ರಯಭೂತನಾದವನು; ಆದ್ದರಿಂದ ಶ್ರದ್ಧಾಯುಕ್ತ ವಾದ ಹಿತನುಡಿಗಳಿಂದ ಮಧುರವಚನಗಳಿಂದ ಸ್ತೋತ್ರಮಾಡು ಎಂದನು (೨೪. ೭೫–೮೬).

ಸುಂದರನು ಮಹೇಶ್ವರನನ್ನು ಕುರಿತು, ದೇವದೇವನೆ ಯಾವ ರೀತಿ ಆರಂಭಿಸಿ, ಯಾವ ಪ್ರಕಾರದಿಂದ ನಿನ್ನ ನಾಮಗಳನ್ನು ಸ್ತೋತ್ರಮಾಡಲಿ? ನಿನ್ನನ್ನು ಸ್ತೋತ್ರಮಾಡಲು ನಾನು ಹೇಗಿರಬೇಕು? ಎಂದು ಕೇಳಲು, ಅದಕ್ಕೆ ಶಿವನು ತನ್ನ ಪಂಚಮುಖಗಳಿಂದ ಸುಂದರನಿಗೆ ಹೀಗೆಂದನು: ಎಲೈ ಸುಂದರನೇ! ಶ್ರೀಮತ್ತಿಲ್ಲಪುರಿಯಲ್ಲಿರುವ ಬ್ರಾಹ್ಮಣಸೇವಕರ ಕಿಂಕರನು ನಾನಾಗಿರುವೆನೆಂದು ಹೇಳುತ್ತಾ, ನನ್ನ ಸ್ತೋತ್ರದಲ್ಲಿ ಆಸಕ್ತರಾದ ಆ ಭಕ್ತವರ್ಯರನ್ನು ಎಣೆಯಿಲ್ಲದ ಮಹಿಮೆಯುಳ್ಳವರೆಂದು ತಿಳಿದು ಸ್ತೋತ್ರಮಾಡೆಂದು ಪರಮೇಶ್ವರನು ಅಪ್ಪಣೆ ಕೊಡಲು, ಸುಂದರನು ದೇವದೇವನ ಅಪ್ಪಣೆಯನ್ನು ತಲೆಯಲ್ಲಿ ಹೊತ್ತು ಭಕ್ತರನ್ನು ದೂರದಿಂದಲೇ ನೋಡಿ, ಸಂತುಷ್ಟಾಂತರಂಗನಾಗಿ ನಮಸ್ಕರಿಸಿದನು. ಅನಂತರ ಶಿವನಭಕ್ತರ ಸಮೂಹವನ್ನು ಕಂಡು ಅವರನ್ನೆಲ್ಲಾ ಪ್ರತ್ಯೇಕ ಪ್ರತ್ಯೇಕವಾಗಿ ನಿಮ್ಮ ಭೃತ್ಯರ ಸೇವಕರಿಗೆ ನಾನು ಸೇವಕನಾಗಿರುವೆನೆಂದು ಭಕ್ತಿಯಿಂದ ಸ್ತೋತ್ರ ಮಾಡಿದನು. ಅನಂತರ ಅವರೂ ನಿನಗೆ ಶಾಶ್ವತವಾದ ಸ್ಥಿತಿಯುಂಟಾಗಲಿ ಎಂದು ಹರಸಿದರು (೨೪. ೮೭–೯೦).

ಹೀಗೆ ಪರಶಿವಭಕ್ತರನ್ನು ಸ್ತುತಿಸಿ ತಾನೂ ಅವರಿಂದ ಸ್ತುತಿಸಲ್ಪಟ್ಟು ಕಮಲಾಲಯ ಕ್ಷೇತ್ರದಲ್ಲಿ ಸುಂದರನು ಸಾಗರಿಕೆಯೊಡನೆ ಸುಖದಿಂದಿರುತ್ತಿದ್ದನು.

ಸುಂದರನು ತನ್ನ ಕೊನೆಗಾಲದಲ್ಲಿ ನಿಜಶರೀರವನ್ನು ಬಿಡದೇ ತನ್ನ ಪ್ರೇಯಸಿಯೊಡನೆ ಶಂಭುವಿನ ಪಾದಕಮಲದಲ್ಲಿ ಐಕ್ಯನಾದನು (೨೪. ೯೧–೯೨).

### ವೀರೋದ್ಭಟಭಕ್ತನ ಕಥೆ

ಕೇರಳದೇಶದಲ್ಲಿ ಅರುಣಾದ್ರಿಯೆಂಬ ಗ್ರಾಮ. ಅಲ್ಲಿ ರುದ್ರವಂಶಕ್ಕೆ ಚೂಡಾಮಣಿಪ್ರಾಯನಾದ ದೃಢನಿಯಮವುಳ್ಳ ಹಾರಭಟನೆಂಬ ಶಿವಭಕ್ತನಿದ್ದನು. ಅವನು ಸಂಸಾರ ಬಂಧನವನ್ನು ತ್ಯಜಿಸಿ, ಶಿವನ ಪಾದಗಳಲ್ಲಿಯೇ ದೃಢವಾದ ಭಕ್ತಿಯುಳ್ಳ ಶಿವಭಕ್ತರಲ್ಲಿ ಯಾವಾಗಲೂ ಶಿವನನ್ನೇ ಭಾವಿಸುತ್ತಾ ವಾಸಿಸುತ್ತಿದ್ದನು. ಅವನು ಶಿವಸ್ಥಾನಗಳಿಗೆಲ್ಲಾ ಹೋಗಿ ಅಲ್ಲಿನ ಶಿವಲಿಂಗಗಳಿಗೆಲ್ಲಾ ನಮಸ್ಕರಿಸಿ, ಈ ಕೇರಳ ದೇಶವನ್ನೊಂದೇ ಅಲ್ಲದೆ ಇತರ ಭೂಮಂಡಲದಲ್ಲೆಲ್ಲಾ ಸಂಚರಿಸಿದನು. ಶಿವಭಕ್ತರ ಸಮಾಚಾರವನ್ನು ಜನರಿಗೆ ತಿಳಿಸಿ, ಶಿವಭಕ್ತಿಯನ್ನು ಸ್ಥಾಪಿಸುವುದರಲ್ಲಿ ಬದ್ಧ ಕಂಕಣನಾಗಿ ಮಂಗಳಕರವಾದ ಆತನು, ಕೊನೆಗೆ ಮಂಗಳಪ್ರದವಾದ ಕಮಲಾಲಯದಲ್ಲಿ ಬಂದು ನೆಲಸಿದನು (೨೯. ೩೫-೪೦). ಶಿವಾಲಯದಲ್ಲಿ ಶಿವಭಕ್ತನಾದ ಸುಂದರನು ಕುಂಕುಮಕೇಸರಿಯ ಲೇಪನದಿಂದ ಗುರುತುಮಾಡಲ್ಪಟ್ಟ ವಿಸ್ತಾರವಾದ ಎದೆಯುಳ್ಳವನಾಗಿದ್ದನು. ಆ ಭಕ್ತನ ತಲೆಯ ತುದಿಯಿಂದ ಪುಷ್ಪಗಳು ಉದುರುತ್ತಿದ್ದುವು. ಇದನ್ನು ನೋಡಿದರೆ ಶಂಕರನ ಶಿರೋಭಾಗದಿಂದ ಅಗ್ನಿಕಣಗಳು ಹೊರಹೊಮ್ಮುವಂತೆ ಕಾಣುತ್ತಿದ್ದುವು. ಕ್ವಣಕ್ವಣವೆಂದು ನಾದಮಾಡುವ ಗೆಜ್ಜೆಗಳನ್ನು ಅಲಂಕರಿಸಿಕೊಂಡಿರುವವನೂ ಹಣೆಗೆ ಹಚ್ಚಿಕೊಂಡಿರುವ ಕಸ್ತೂರೀ ತಿಲಕದಿಂದ ದಿಕ್ಪ್ರದೇಶಗಳನ್ನೆಲ್ಲಾ ಸುವಾಸನೆಗೊಳಿಸುವವನೂ ಕೊರಳಲ್ಲಿ ಜೋಲುಬಿದ್ದಿರುವ ರುದ್ರಾಕ್ಷಸಮೂಹವುಳ್ಳವನೂ ಮನೋಹರವಾದ ಕುಂಡಲವುಳ್ಳವನೂ ಆಗಿ ವಿರಾಜಿಸುತ್ತಿದ್ದನು. ಮೊಳಕಾಲಿನವರೆಗೂ ಸಿದ್ಧವಾಗಿ ಶೋಭಿಸುತ್ತಿರುವ ಉದ್ದವಾದ ತೋಳ್ಗಳುಳ್ಳವನಾಗಿ ಗಂಭೀರತೆಯನ್ನು ಪಡೆದಿದ್ದನು. ತನ್ನ ಹೋಲಿಕೆಯಿಂದ ಇತರ ದೊಡ್ಡ ದೊಡ್ಡ ಭಕ್ತರನ್ನೂ ಕಡೆಗಾಣಿಸಿ ವಿಶೇಷಕಾಂತಿಯಿಂದ ಭೂಮಿಯಲ್ಲಿ ಮೆಲ್ಲಮೆಲ್ಲನೆ ಬರುತ್ತಿರುವ ಭಕ್ತವರ್ಯನೂ ಲೋಕಸುಂದರನೂ ಆದ ಈ ಸುಂದರನನ್ನು (ವೀರೋದ್ಭಟನು) ಕೊಲ್ಲಲು ಮನಸ್ಸು ಮಾಡಿದನು. ಆಗ ಹೆದರಿಕೆಯಿಂದ ಶಿವನ ಗರ್ಭಗುಡಿಯನ್ನು ಸುಂದರನು ಹೊಕ್ಕು ಬಾಗಿಲನ್ನು ಬಿಗಿಯಾಗಿ ಮುಚ್ಚಿಕೊಂಡನು. ಹೀಗೆ ಗರ್ಭಗುಡಿಯಲ್ಲಿ ಅವಿತುಕೊಂಡ ಸುಂದರನನ್ನು ಕಂಡು ವೀರೋದ್ಭಟನು, ಎಲೈ ಶಿವನೇ, ವಿನಯವಿನಲ್ಲದ ಈ ಯುವಕನಾದ ಶೈವಬ್ರಾಹ್ಮಣನಲ್ಲಿ ನಿನಗೆ ಪ್ರೀತಿಯಿರುವುದಾದರೆ, ಮಹಾದೇವ, ನೀನು ದೊಡ್ಡವನಾದರೂ ಹೊರಗೆ ಬಾ, ನೋಡುತ್ತೇನೆ ಎಂದು ದಿಟ್ಟತನದಿಂದ ನುಡಿದನು. ಆ ಮಾತು ಕೇಳಿದ ಶಿವನು ಚಿಂತೆಗೊಂಡು ತನ್ನನ್ನು ಮರೆಹೊಕ್ಕಿರುವ

ಸುಂದರನಿಗೆ, ಎಲೈ ಸುಂದರನೇ, ವೀರೋದ್ಭಟನೇ ಮೊದಲಾದವರನ್ನು ಸ್ತೋತ್ರ ಮಾಡು, ಭಯವನ್ನು ತೊರೆ ಎಂದನು. ಶಿವನ ನುಡಿಯಂತೆ ಸುಂದರನು ಗರ್ಭ ಗುಡಿಯಲ್ಲೇ ಸ್ತೋತ್ರಮಾಡಿದನು. ಮಹಾಮಹಿಮರಾದ ಶಂಕರನ ಭಕ್ತರೆಲ್ಲರೂ ಸುಂದರನ ಸ್ತೋತ್ರವನ್ನು ಕೇಳಿ, ಆತನನ್ನು ಭಕ್ತಾಗ್ರೇಸರನೆಂದು ತಿಳಿದರು. ಆಮೇಲೆ ಆ ಸುಂದರನೂ ಮಹಾದೇವನ ಆಶ್ರಯವನ್ನು ಪಡೆದು ಭಕ್ತಿಯಿಂದ ಪೂರ್ಣವಾಗಿ ಶಿವಭಕ್ತರ ಅಂತರಂಗವೋ (ಮನಸ್ಸೋ) ಎನ್ನುವಂತೆ ಭಯವನ್ನು ತೊರೆದು ಆನಂದದಿಂದಿದ್ದನು. ಸುಂದರನು ಹೀಗೆ ಭೂಮಿಯಲ್ಲಿ ಶಿವಭಕ್ತರಾದ ಮಹಾನುಭಾವರಲ್ಲಿ ಒಂದು ವ್ಯವಸ್ಥೆಯನ್ನು ಕಲ್ಪಿಸುತ್ತಾ, ಸೌಮ್ಯನಾಥನು ಹೇಳಿದ ಶಂಭುಭಕ್ತರ ಸ್ತೋತ್ರರೂಪವಾದ ಪ್ರಬಂಧಕ್ಕೋಸ್ಕರ ತನ್ನ ಇಚ್ಛೆಬಂದಂತೆ ಎಲ್ಲಾ ಕಡೆಯಲ್ಲಿಯೂ ಸಂಚರಿಸಿದನು (೨೯. ೪೫–೫೪, ೫೬–೫೮).

### ಪೂತವತಿ

ಕಾರಿಕಾಲಮ್ಮೆಯನ್ನು ಶಿವರಹಸ್ಯದಲ್ಲಿ ಪೂತವತಿ ಎಂದು ಕರೆಯಲಾಗಿದೆ. ಪೂತವತಿಯು ಶಂಕರನಿಂದ ಆಶ್ರಿತವಾದ ಕೈಲಾಸಪರ್ವತವನ್ನು ಕಾಲಿನಿಂದ ಮುಟ್ಟಲು ಯೋಗ್ಯವಲ್ಲವೆಂದು ಭಾವಿಸಿ ತಲೆಯಿಂದಲೇ ಕೈಲಾಸಪರ್ವತವನ್ನು ಹತ್ತಲು ಪೂರ್ವಮುಖಮಾಡಿಕೊಂಡು ಏರತೊಡಗಿದಳು. ಅವಳನ್ನು ಮಾರ್ಗ ಮಧ್ಯೆ ನಂಬಿಯಣ್ಣನು ಕಂಡದ್ದರ ಉಲ್ಲೇಖ ಪೂತವತಿಯ ಕಥೆಯಲ್ಲಿ ಎಲ್ಲೂ ಬರುವುದಿಲ್ಲ.

### ಕಲಿಕಾಮ

ಚೋಳದೇಶದ ಕಾವೇರಿನದಿಯ ದಡದಲ್ಲಿ ಪ್ರಸಿದ್ಧವಾದ ಮಹಾಮಂಗಳವೆಂಬ ಪಟ್ಟಣ. ಅಲ್ಲಿ (ದೇವಗೋಪ) ಗೊಲ್ಲರ ವಂಶದಲ್ಲಿ ಹುಟ್ಟಿದ ಕಲಿಕಾಮನೆಂಬ ಶೂದ್ರನೊಬ್ಬನಿದ್ದನು. ಇವನು ಚೋಳರಾಜನ ಸೇನಾಪತಿಯಾಗಿದ್ದು ಶೈವರನ್ನು ತ್ರಿಕರಣಪೂರ್ವಕವಾಗಿ ಪೂಜಿಸುತ್ತಿದ್ದನು. ಸೌಮ್ಯೇಶನು (=ಸುಂದರನು) ತನ್ನ ಹೆಂಡತಿಯನ್ನು ಕರೆದು ತರುವ ವಿಷಯದಲ್ಲಿ ಶಿವನನ್ನು ದೂತನನ್ನಾಗಿ ಕಳುಹಿಸಿದ ನೆಂದು ಕಲಿಕಾಮನು ವ್ಯಾಕುಲನಾಗಿ ಕೋಪಗೊಂಡನು. ತನ್ನ ಹೆಂಡತಿಯಲ್ಲಿ ಕಾಮಾಭಿಲಾಷೆಯುಳ್ಳ ಆ ಅಧಮನು ಮಹೇಶ್ವರನನ್ನು ಈ ದೌತ್ಯದಲ್ಲಿ ನಿಯಮಿಸಿದ ನಲ್ಲಾ! ಅಯ್ಯೋ, ನನ್ನ ಸ್ವಾಮಿಯು ರಾತ್ರಿಯಲ್ಲಿ ಹೇಗೆ ಹೋಗುವನು ಹೇಗೆ ಬರುವನು ಎಂದು ಕಲಿಕಾಮನು ಚಿಂತಿಸಿದನು. ಶಿವನನ್ನು ಆ ಕೆಲಸಕ್ಕಾಗಿ ಕಳು ಹಿಸಿದ ಸುಂದರನನ್ನು ಯಾವಾಗ ನೋಡುವೆನೋ, ಅಥವಾ ಅವನನ್ನು ನೋಡಿ ಆಗಬೇಕಾದ್ದೇನು ಎಂದು ಅವನು ಕೋಪದಿಂದ ಕಲುಷಿತಚಿತ್ತನಾದನು. ಈ

ವಿಷಯುವನ್ನು ತಿಳಿದ ಸೌಮ್ಯನು ಶಿವನಲ್ಲಿಗೆ ಬಂದು ಶಿವನೇ, ನನ್ನ ಈ ತಪ್ಪನ್ನು ಕ್ಷಮಿಸೆಂದು ವಿನಯಪೂರ್ವಕವಾಗಿ ಪ್ರಾರ್ಥಿಸಿದನು. ಶಿವನು ಸೌಮ್ಯೇಶ ಮತ್ತು ಕಲಿಕಾಮರಿಬ್ಬರಿಗೂ ಸ್ನೇಹವನ್ನುಂಟುಮಾಡಲು ಯೋಚಿಸಿ ಕಲಿಕಾಮನಿಗೆ ಉದರ ಶೂಲೆಯನ್ನುಂಟುಮಾಡಿದನು. ಅದರಿಂದ ಪೀಡಿತನಾದ ಕಲಿಕಾಮನು ಶಿವನನ್ನು ಸ್ತುತಿಸಿದನು. ಆ ಸ್ತೋತ್ರಪ್ರೀತನಾದ ಮಹೇಶನು ತನ್ನ ಭಕ್ತನಿಗೆ ಕನಸಿನಲ್ಲಿ ಕಾಣಿಸಿಕೊಂಡು ನಿನಗುಂಟಾಗಿರುವ ಈ ಶೂಲವೇದನೆಯನ್ನು ಹೋಗಲಾಡಿಸಲು, ಆ ಸೌಮ್ಯನನ್ನು ಬಿಟ್ಟರೆ ಮತ್ತಾರಿಂದಲೂ ಸಾಧ್ಯವಿಲ್ಲವೆಂದನು. ಅದಕ್ಕೆ ಕಲಿ ಕಾಮನು, ಆ ಸೌಮ್ಯನು ಬಂದು ಶೂಲವ್ಯಾಧಿಯನ್ನು ಶಮನಮಾಡುವುದಕ್ಕಿಂತ ನನಗೆ ಈ ವೇದನೆಯಿರುವುದೇ ಸಹ್ಯವು ಎಂದನು. ಶಿವನು ಸೌಮ್ಯನ ಸ್ವಪ್ನದಲ್ಲಿ ಬಂದು, ಕಲಿಕಾಮನ ಶೂಲಪೀಡೆಯನ್ನು ಜಾಗ್ರತೆ ಶಮನ ಮಾಡೆಂದನು. ಸೌಮ್ಯನು ಅದರಂತೆ ನಡೆಸಲು ಸಿದ್ಧನಾದನು. ಕಲಿಕಾಮನಿಗೆ ತನ್ನ ಶೂಲವ್ಯಾಧಿಯನ್ನು ಹೋಗಲಾಡಿಸಲು ಸೌಮ್ಯನು ತಾನಾಗಿ ಬರುತ್ತಿರುವುದನ್ನು ತಿಳಿಯಿತು. ವಿಶೇಷ ವಾಗಿ ಚಿಂತಿಸಿದ ಕಲಿಕಾಮನು ಸೌಮ್ಯನು ಬರುವಷ್ಟರಲ್ಲಿ ನನ್ನ ಹೊಟ್ಟೆಯನ್ನು ಸೀಳಿಕೊಳ್ಳುವೆನೆಂದು ತೀರ್ಮಾನಿಸಿ ಅದರಂತೆಯೇ ತನ್ನ ಹೊಟ್ಟೆಯನ್ನು ಸೀಳಿ ಕೊಂಡು ಪ್ರಾಣಬಿಟ್ಟನು. ಪತಿಯ ಮರಣಾನಂತರ ಪತಿಯನ್ನು ಹಿಂಬಾಲಿಸಲು ತೀರ್ಮಾನಿಸಿ ಕಲಿಕಾಮನ ಹೆಂಡತಿ ಸಾಯಲು ಸಿದ್ಧಳಾದಳು. ಸೌಮ್ಯನು ಆ ಕ್ಷಣದಲ್ಲಿಯೇ ಬಂದದ್ದನ್ನು ಕೇಳಿದ ಆ ಸಾಧ್ವಿಯು ತಾನು ಸಾಯುವುದನ್ನು ನಿಲ್ಲಿಸಿ ತನ್ನ ಗಂಡನನ್ನು ಮುಚ್ಚಿ ಮರೆಮಾಡಿ ಕೂಡಲೇ ಮನೆಯನ್ನೆಲ್ಲಾ ಅಲಂಕರಿಸಿ ಬಂದಿರುವ ಸೌಮ್ಯನಿಗೆ ಸ್ವಲ್ಪವೂ ದುಃಖವಿಲ್ಲದಂತೆ ಉಪಚರಿಸಿದಳು. ಆ ಉಪಚಾರ ಸ್ವೀಕರಿಸಿ, ನಂತರ ಸೌಮ್ಯನು ತಾನು ಬಂದ ಕಾರಣ ತಿಳಿಸಿದನು. ಆಗ ಕಲಿಕಾಮನ ಪತ್ನಿಯ ಪಕ್ಕದಲ್ಲಿದ್ದ ಜನಗಳು 'ನೀನು ದೈವಪ್ರೇರಿತನಾಗಿ ಬಂದ ಮಾತ್ರದಿಂದಲೇ ಆ ಕಲಿಕಾಮನ ಉದರಶೂಲೆಯು ಶಾಂತವಾಯಿತು. ಈಗ ಅವನು ಅಸ್ಥಿಮಾತ್ರಶೇಷನಾಗಿ ಮಲಗಿ ಅಂತರ್ಗೃಹದ ಒಳಗೆ ಸುಖವಾಗಿ ಮಹಾದೇವ ನನ್ನು ಸ್ತುತಿಸುತ್ತಿರುವನು' ಎಂದರು. ಅದಕ್ಕೆ ಸೌಮ್ಯನು ಅವನನ್ನು ಹೇಗಾದರೂ ನಾನು ನೋಡಬೇಕೆಂದಿರುವೆನೆಂದು ಹೇಳಲು, ನಿರ್ವಾಹವಿಲ್ಲದೆ ಅವರು ಕಲಿಕಾಮನ ಮೃತದೇಹವನ್ನು ಸೌಮ್ಯನಿಗೆ ತೋರಿಸಿದರು. ಅದನ್ನು ನೋಡಿದ ಸೌಮ್ಯನು ಗೋಳಾಡಿ ತಾನೂ ಪ್ರಾಣತ್ಯಾಗಮಾಡಲು ಕತ್ತಿಯನ್ನು ಒರೆಯಿಂದ ಹಿರಿದು ಹಿಡಿದುಕೊಂಡನು. ಅಷ್ಟರಲ್ಲಿಯೇ ಆ ದೇವಾದಿದೇವನ ಕರುಣೆಯಿಂದ ಮೃತ ನಾಗಿದ್ದ ಕಲಿಕಾಮನೂ ಎದ್ದು ನಿಂತು, ಅಯ್ಯೋ! ಕೆಟ್ಟೆನೆಂದು ಹೇಳುತ್ತ ಆ ಸೌಮ್ಯನ ಕೈಯಲ್ಲಿದ್ದ ಆಯುಧವನ್ನು ಬಹಳ ಸ್ನೇಹದಿಂದ ಹಿಡಿದುಕೊಂಡನು. ಅವರಿಬ್ಬರೂ ಪರಸ್ಪರ ಪ್ರೇಮಭಾವನೆಯಿಂದ ವಂದಿಸಿದರು. ಅವರಿಬ್ಬರೂ ಆಪ್ತ ಸ್ನೇಹಿತರಾಗಿ ಕರಂಜಪುರಾಧಿಪನಾದ ಶಿವನನ್ನು ವಂದಿಸಿ ಪೂಜಿಸಿದರು. ಸೌಮ್ಯನು

ಶ್ರೀಗಾನ (ಶ್ರೀರಾಗ)ದಿಂದ ಶಂಕರನನ್ನು ವಿಧವಿಧವಾಗಿ ಸ್ತುತಿಸಿ ಹಾಡಿದನು. ಅನಂತರ ಸೌಮ್ಯನು ಕಲಿಕಾಮನೊಡನೆ ಕಮಲಾಲಯ ಕ್ಷೇತ್ರಕ್ಕೆ ಬಂದು ಮಹಾದೇವನಿಗೆ ವಂದಿಸಿ ಅಲ್ಲಿಯೇ ಬಹುಕಾಲ ವಾಸಮಾಡಿದನು. ಕಲಿಕಾಮನು ಸುಂದರೇಶನ ಅನುಮತಿಯನ್ನು ಪಡೆದು ತನ್ನ ಸ್ವಂತ ಸ್ಥಳಕ್ಕೆ ಹಿಂತಿರುಗಿದನು (ಅ. ೫೧).

ಸೋಮಯಾಜಿಮಾರ

ಸುಂದರವಾದ ವನಾದಿಗಳಿಂದ ಅಲಂಕೃತವಾದ ಒಂದು ಗ್ರಾಮದಲ್ಲಿ ಯಾಗಶೀಲರ ವಂಶದಲ್ಲಿ ಜನಿಸಿದ ಮಾರಸೋಮಯಾಜಿಯು ವಾಸವಿದ್ದನು. ಅವನು ಶ್ರೌತಕರ್ಮಗಳಿಂದ ಶಿವನನ್ನು ಸಂತೋಷಪಡಿಸುವುದೇ ಶ್ರೇಯಸ್ಸೆಂದು ನಂಬಿ, ಅದರಂತೆ ಶ್ರೌತಕರ್ಮಗಳನ್ನು ನಡೆಸುವುದರಲ್ಲಿ ಆಸಕ್ತನಾಗಿದ್ದನು. ಶೈವರು ಎಂತಹ ಆಚಾರ ವ್ಯವಹಾರಗಳಿಂದ ನಡೆಯುತ್ತಿದ್ದರೂ ಶಿವಪೂಜಕರಾದ ಅವರೇ ನಮ್ಮ ವಂಶಾಧಿಪತಿಗಳೆಂದು ತಿಳಿದು, ಆ ಶೈವರನ್ನು ಅವನು ಪೂಜಿಸುತ್ತಿದ್ದನು. ಶರೀರುದ್ಧಿಯನ್ನುಂಟುಮಾಡುವ ಅನೇಕ ಮಂತ್ರಗಳಿದ್ದರೂ ಅವನು ಸದಾ ಶಿವಪಂಚಾಕ್ಷರವನ್ನೇ ಜಪಿಸುತ್ತಿದ್ದನು. ಒಮ್ಮೆ ಇವನು ವಲ್ಮೀಕೇಶ್ವರಸ್ವಾಮಿಯ ನಿವಾಸಸ್ಥಾನವಾದ ಕಮಲಾಲಯಕ್ಷೇತ್ರಕ್ಕೆ ಬಂದು, ಅಲ್ಲಿದ್ದ ಸುಂದರೇಶ್ವರಸ್ವಾಮಿಯಲ್ಲಿಯೇ ನೆಟ್ಟಮನವುಳ್ಳವನಾಗಿ ಬ್ರಹ್ಮಾನಂದ ಹೊಂದಿದನು. ಮಹಾತ್ಮನಾದ ಸೋಮಯಾಜಿಯ ಮನಸ್ಸು ಶೈವಪೂಜೆಯಿಂದ ಶುದ್ಧವಾಗಿ ಪರಿಪಕ್ವವಾಗಿತ್ತು. ಸೋಮಯಾಗದಲ್ಲಿ ಸೋಮರಸ ಪಾನಮಾಡಿ ಮಹೇಶನನ್ನು ಮನದಲ್ಲಿ ಧ್ಯಾನಿಸುತ್ತಾ, ಆ ಸುಂದರೇಶನು ಹೇಳಿರುವ ವಿಧಿಗನುಗುಣವಾಗಿ ಅವನು ಹವಿಸ್ಸನ್ನು ಹೋಮಮಾಡುತ್ತಾ ಇದ್ದನು. ಶಿವನು ಇವನ ಭಕ್ತಿಯನ್ನು ಲೋಕಕ್ಕೆ ತಿಳಿಯಪಡಿಸಲು ನೀಚವೇಷವನ್ನು ಧರಿಸಿ ಬಂದು ಬಹುವಾಗಿ ಪರೀಕ್ಷಿಸಿ ದೃಢಭಕ್ತಿಗೆ ಮೆಚ್ಚಿ ಇವನಿಗೆ ಸಾರೂಪ್ಯ ಮೋಕ್ಷವನ್ನು ಅನುಗ್ರಹಿಸಿದನು (ಅ. ೫೪. ೧–೧೦).

ಶೂರಶರ್ಮ (ಶೂರಸೇನ)[12]

ಮಿಥಿಲಾದೇಶದಲ್ಲಿ ಮಿಥಿಲಾಪಟ್ಟಣದಲ್ಲಿ ಶೂರಶರ್ಮನೆಂಬ ಬ್ರಾಹ್ಮಣನಿದ್ದನು. ಇವನು ಶಿವನ ಕಿಂಕರನಾಗಿದ್ದು ಆ ಪಟ್ಟಣದ ಶೈವರೂ ಜಿತೇಂದ್ರಿಯರೂ ಆದವರಿಗೆಲ್ಲಾ ಶ್ರೇಷ್ಠನಾಗಿದ್ದನು. ಮತ್ತೊಬ್ಬರಿಂದ ಹೇಳಿಸಿಕೊಳ್ಳದೇ ಇವನು ಶೈವರ ಸೇವೆಯನ್ನು ಸದಾ ಮಾಡುತ್ತಿದ್ದನು. ಶಿವನ ಮಹಿಮೆಯನ್ನು

---

12 ಪೆರಿಯಪುರಾಣಂನಲ್ಲಿ ಬರುವ ಪೆರುಮಿಳಲೈ ಕುಱುಂಬನು ಶಿವರಹಸ್ಯದಲ್ಲಿ ಶೂರಶರ್ಮ ಅಥವಾ ಶೂರಸೇನನಾಗಿರುವರು.

ಕೇಳಿದ ಅವನು ಮೊದಲು ಸುಂದರನಾಥನ ಪಾದಸ್ಮರಣ ನಿರತನಾದನು. ಇವನನ್ನು ಪರೀಕ್ಷಿಸಲು ಶಿವನು ನೀಚವೇಷ ಧರಿಸಿ ಹೆಂಡದ ಗಡಿಗೆಯನ್ನು ಕೈಯಲ್ಲಿ ಹಿಡಿದು ಇವನ ಮನೆಯ ಮಧ್ಯಭಾಗಕ್ಕೆ ಶ್ರಾದ್ಧಕಾಲದಲ್ಲಿ ಬಂದನು. ಶ್ರಾದ್ಧಕ್ಕೆ ಬ್ರಾಹ್ಮಣರನ್ನು ಆಹ್ವಾನಿಸಿರಲು ಅವರು ಶುಚಿರ್ಭೂತರಾಗಿ ಆಸನದಲ್ಲಿ ಮಂಡಿಸಿದ್ದರು. ಆ ಸಂದರ್ಭದಲ್ಲಿ ಶೂರಶರ್ಮನು ಹಣೆಯಲ್ಲಿ ವಿಭೂತಿ ಧರಿಸಿದ್ದ ಚಂಡಾಲನನ್ನು ನೋಡಿ ಜಗ್ಗನೆ ಅವನನ್ನು ಎದುರ್ಗೊಂಡು ಕರೆತಂದು ಪಿತೃಕಾರ್ಯಕ್ಕೆ ಸಿದ್ಧಮಾಡಿದ್ದ ಹವಿಸ್ಸನ್ನು ಮೊದಲು ಆ ಚಂಡಾಲನಿಗೆ ಅರ್ಪಿಸಿದನು. ಶೂರಶರ್ಮನ ವರ್ತನೆ ಒಪ್ಪಿತವಾಗದ ಬ್ರಾಹ್ಮಣರು ಛೀ! ನಿನಗೆ ಧಿಕ್ಕಾರವು ಎಂದು ನಿಂದಿಸಿ ಅಲ್ಲಿಂದ ಹೊರಟುಹೋದರು. ಬಂಧುಗಳು ನಿಂದಿಸಿ ಅಲ್ಲಿ ನಿಲ್ಲದೆ ಹೊರಟು ಹೋದರೂ ಶೂರಶರ್ಮನು ವಿಚಲಿತನಾಗಲಿಲ್ಲ. ಚಂಡಾಲನು ಹವಿಸ್ಸನ್ನು ಸ್ವೀಕರಿಸಿ ತೃಪ್ತನಾಗಿ ಹೋದನು. ಹೋಗುವಾಗ ತಾನು ಊಟಮಾಡಿದ ಪಾತ್ರೆಯನ್ನು ಮನೆಯ ಅಂಗಳದಲ್ಲೇ ಬಿಟ್ಟು ಹೋದನು. ಅವನು ಹೋದ ಮೇಲೆ ಶೂರಶರ್ಮನ ಹೆಂಡತಿ ಕೋಪಗೊಂಡು ಚಂಡಾಲನುಂಡು ಬಿಟ್ಟು ಹೋದ ಪಾತ್ರೆಯನ್ನು ಶೂದ್ರಸ್ತ್ರೀಯಿಂದ ಆಚೆಗೆ ತೆಗೆಸಿಹಾಕಿದಳು. ಶೂದ್ರ ಸ್ತ್ರೀಯೂ ಆ ಪಾತ್ರೆಯನ್ನು ಮುಟ್ಟಲು ಹೇಸಿ ಕೋಲಿನಿಂದ ಆ ಪಾತ್ರೆಯ ಮಧ್ಯಭಾಗವನ್ನು ಹಿಡಿದು ಎತ್ತಿಕೊಂಡು ಹೋಗಿ ಊರ ಹೊರಗೆ ಅದನ್ನು ಎಸೆದು ಅನಂತರ ಸ್ನಾನಮಾಡಿ ಮನೆಗೆ ಬಂದಳು. ಪುನಃ ಇನ್ನೊಂದು ಮತ್ತೊಂದು ಹೀಗೆ ಬಾರಿಬಾರಿಗೂ ಆ ಅಂಗಣದಲ್ಲಿ ಅದೇ ಪಾತ್ರೆಗಳು ಕಂಡು ಬಂದವು. ಅವೆಲ್ಲವನ್ನೂ ಶೂದ್ರ ಸ್ತ್ರೀಯಿಂದ ಎತ್ತಿಹಾಕಿಸಿದ ಮೇಲೆ ಆ ಶೂರ ಶರ್ಮನ ಹೆಂಡತಿಗೆ ನೆಮ್ಮದಿಯುಂಟಾಯಿತು. ಹೊಸದಾಗಿ ಹೆಂಡತಿಯಿಂದ ಅಡಿಗೆ ಮಾಡಿಸಿ, ಶೂರಶರ್ಮನು ಶ್ರಾದ್ಧಕ್ಕೆ ಕರೆದಿದ್ದ ಬ್ರಾಹ್ಮಣರನ್ನು ಮತ್ತೆ ಕರೆಯಲು ಹೋದನು. ಬ್ರಾಹ್ಮಣರೆಲ್ಲರೂ ಕೋಪಗೊಂಡು "ಛೀ! ನೀಚ! ಚಂಡಾಲನಿಗೆ ಭೋಜನ ಮಾಡಿಸಿದ ನಿನ್ನನ್ನು ಧಿಕ್ಕರಿಸುವೆವು. ನೀನು ಬ್ರಾಹ್ಮಣ ಸಂಘದಿಂದಲೇ ಬಹಿಷ್ಕಾರ ಹೊಂದತಕ್ಕವನಾಗಿದ್ದೀಯೆ. ಈ ಗ್ರಾಮವನ್ನೇ ಬಿಟ್ಟು ಬೇರೆಲ್ಲಿ ಯಾದರೂ ದೂರ ಹೊರಗೆ ಹೋಗು" ಎಂದು ನಿಂದಿಸಿದರು. ಶೂರಶರ್ಮನ ಭಕ್ತಿ ಯನ್ನು ಬ್ರಾಹ್ಮಣರಿಗೆ ತೋರಲೆಂದು ಶಿವನು ಪಾರ್ವತಿಯೊಡನೆ ಪ್ರತ್ಯಕ್ಷನಾದನು. ಸ್ವರ್ಗಲೋಕಕ್ಕೆ ವಿಮಾನದಲ್ಲಿ ಹೋಗುತ್ತಿರುವ ಶೂರಶರ್ಮನ ಪಿತೃಗಳನ್ನು ಶಿವ ಅವನಿಗೆ ತೋರಿದನು. ತಮಗೆ ಮಗನಿಂದ ಸ್ವರ್ಗ ಪ್ರಾಪ್ತಿಯಾದುದು ಸಂತೋಷ ವನ್ನು ತಂದಿದೆಯೆಂದು ಶೂರಶರ್ಮನ ಪಿತೃಗಳು ತಮ್ಮ ಮಗನಿಗೆ ಹೇಳಿ, ನೂರು ವರುಷ ಸುಖವಾಗಿ ಬಾಳೆಂದು ಆಶೀರ್ವದಿಸಿ ಹೋದರು. ಶಿವಪಾದಪೂಜಕನಾದ ಶೂರಶರ್ಮನನ್ನು ಹೃದಯಪೂರ್ವಕವಾಗಿ ಬ್ರಾಹ್ಮಣರೆಲ್ಲರೂ ನೀನೇ ಧನ್ಯನೆಂದು ಹೊಗಳಿದರು. ಕೈಲಾಸಕ್ಕೆ ಪತ್ನಿಯೊಡನೆ ಬರಲು ಅನುಗ್ರಹಿಸುವಂತೆ ಶಿವನನ್ನು

ಶೂರಶರ್ಮನು ಪ್ರಾರ್ಥಿಸಿದನು. ಶಿವನು ಅದಕ್ಕೆ ಒಪ್ಪಿ ಅವನಿಗೆ ಯೋಗಶಕ್ತಿಯನ್ನು ದಯಪಾಲಿಸಿದನು. ಶೂರಶರ್ಮನು ಸಮಾಧಿಮಗ್ನನಾಗಿ ಸುಷುಮ್ನಾನಾಡಿಯನ್ನು ಪೂರಕ ಪ್ರಾಣಾಯಾಮ ವಿಶೇಷದಿಂದ ವಾಯುವಿನಿಂದ ಪೂರ್ಣಮಾಡಿ, ಜಾಗ್ರತೆಯಾಗಿ ಚಂದ್ರನಾಡಿಯನ್ನು ಭೇದಿಸಿ ಬ್ರಹ್ಮಕಪಾಲರಂಧ್ರವನ್ನು ಆ ವಾಯುವಿನ ಒತ್ತಡದಿಂದ ಭೇದಿಸಿಕೊಂಡು ಕೈಲಾಸವಾಸಿಯಾದ ಶಿವನನ್ನು ಸೇರಿದನು. (ಅ. ೪೪. ೧೩–೫೬).

## ಮಹಾಗೋದ[13]

ಕೇರಳ ದೇಶದಲ್ಲಿ ಮಹೋದಯ ಎಂಬ ಪಟ್ಟಣವಿದ್ದಿತು. ಅದರ ಅರಸು ಮಹಾಗೋದನೆನ್ನುವವನು ಚೋಳರಾಜನು. ಮಹೋದಯದಲ್ಲಿ ಶಿವಸ್ಥಾನವಾದ ಶ್ರೀವಾಂಛವು ಪ್ರಸಿದ್ಧ ಕ್ಷೇತ್ರವಾಗಿದ್ದಿತು. ಶ್ರೀವಾಂಛಾಪುರೇಶ್ವರನಿಗೆ ಪ್ರಾಕಾರ, ಗೋಪುರ, ಎತ್ತರವಾದ ಮಂಟಪ ಮುಂತಾದುವುಗಳನ್ನೂ ಹೂವು ಹಣ್ಣುಗಳ ತೋಟಗಳನ್ನೂ ರಥವಾಹನ ಮುಂತಾದುವುಗಳನ್ನೂ ಮಾಡಿಸಿ ಉತ್ಸವಗಳನ್ನು ನಡೆಸುತ್ತಾ, ಶೈವರ ಪೂಜೆಗಳನ್ನು ನೆರವೇರಿಸಿಕೊಂಡು ರಾಜನು ಅಲ್ಲಿಯೇ ಅನೇಕ ದಿವಸಗಳನ್ನು ಕಳೆದನು. ನಿತ್ಯವೂ ಬೆಳಗ್ಗೆ ಎದ್ದು ಮನಸ್ಸಿನಲ್ಲಿ ಶಿವನನ್ನು ಧ್ಯಾನಿಸಿ, ಮಹೇಶ್ವರ ತೀರ್ಥದಲ್ಲಿ ಸ್ನಾನಮಾಡಿ, ಪವಿತ್ರವಾದ ಭಸ್ಮಧಾರಣೆ ಮಾಡಿ, ಕೋಮಲವಾದ ಹೂಗಳಿಂದ ಆ ಚಂದ್ರಚೂಡನಿಗೆ ಹಾರಮಾಡಿ ಧರಿಸುತ್ತಿದ್ದನು. ಶ್ರೀಮಂಜತೀರ್ಥದಿಂದ ನೀರು ತಂದು ದೇವಸ್ಥಾನವನ್ನು ಶುದ್ಧಿಮಾಡುತ್ತಿದ್ದನು. ಭಕ್ತಿಪೂರ್ಣವಾಗಿ ಸಗಣಿಯಿಂದ ಶಿವಾಲಯವನ್ನು ಸಾರಿಸುತ್ತಿದ್ದನು. ಅಲ್ಲದೆ ಆ ಶೈವನು ಭಕ್ತಿಪೂರ್ವಕವಾಗಿ ದೀಪಗಳನ್ನು ಹೊತ್ತಿಸಿ ಪ್ರಕಾಶಗೊಳಿಸುತ್ತಾ ಏಕಾಂತದಲ್ಲಿ ಶಿವನನ್ನು ಪೂಜಿಸುತ್ತಾ, ಯಾವಾಗಲೂ ನೃತ್ಯ, ಗಾನ ಮತ್ತು ವಾದ್ಯಗಳಿಂದ ಮಹಾದೇವನಿಗೆ ಪೂಜೆಯನ್ನು ಸಮರ್ಪಿಸುತ್ತಿದ್ದನು. ಈ ಮಹಾಗೋದರಾಜನು ಯಾವಾಗಲೂ ಮಂತ್ರಗಳಿಂದ ಪುರಸ್ಕೃತನಾಗಿ ಶಿವಕ್ಷೇತ್ರದಲ್ಲಿ ಶಿವನಾಮಗಳನ್ನೇ ಸದಾ ಹಾಡುತ್ತಾ ವಾಸವಾಗಿದ್ದನು.

ಬಹಳಕಾಲ ಸುಖವಾಗಿ ರಾಜ್ಯಭಾರಮಾಡಿದ ಮಹಾಗೋದನು ಶಿವಸೇವೆಗೆ ಪ್ರಭುತ್ವವು ಅಡ್ಡಿಯೆಂದು ಬಗೆದು ಕಾಡಿಗೆ ತಪಸ್ಸು ಮಾಡಲು ನಡೆದನು. ಮಂತ್ರಿಗಳು ರಾಜನಲ್ಲಿಗೆ ಬಂದು ರಾಜ್ಯಕ್ಕೆ ಹಿಂತಿರುಗುವಂತೆ ಮನವೊಲಿಸಲು ಯತ್ನಿಸಿದರು. 'ನಿಮ್ಮ ಅಭಿಪ್ರಾಯವನ್ನು ಶಿವನ ಸನ್ನಿಧಿಯಲ್ಲಿ ನಿವೇದಿಸಿ ಅನಂತರ ನಿರ್ಧಾರ

---

13 ಪೆರಿಯಪುರಾಣಂನಲ್ಲಿ ಬರುವ ಚೇರಮಾನ್ ಪೆರುಮಾಳರು ಶಿವರಹಸ್ಯದಲ್ಲಿ ಮಹಾಗೋದರಾಗಿರುವರು.

ಕೈಗೊಳ್ಳುವೆ' ಎಂದು ಮಹಾಗೋದನು ಮಂತ್ರಿಗಳಿಗೆ ತಿಳಿಸಿದನು. ಆ ಪ್ರಕಾರ ರಾಜನು ಶಿವನಲ್ಲಿ ಅರಿಕೆ ಮಾಡಿಕೊಳ್ಳಲು ಅದಕ್ಕೆ ಶಿವನು 'ನೀನು ಮಾಡುವ ರಾಜ್ಯಪರಿಪಾಲನೆಯೂ ನನ್ನ ಸೇವೆಯೆಂದೇ ತಿಳಿ; ಇದರಿಂದ ನನ್ನ ಸೇವೆಗೆ ವಿಘ್ನ ವೆಂದು ಎಣಿಸಬೇಡ; ಈ ರಾಜ್ಯಭಾರವು ನನ್ನ ದೊಡ್ಡಪೂಜೆಗೆ ಕಾರಣವಾಗುವುದು, ರಾಜ್ಯದಲ್ಲಿ ಧನಧಾನ್ಯ ಸಮೃದ್ಧಿಯಾಗಿದ್ದಾಗ ನನ್ನ ಕ್ಷೇತ್ರಗಳಲ್ಲೆಲ್ಲಾ ಕೋಟೆ, ಕೊತ್ತಲ, ಪ್ರಾಕಾರ, ಗೋಪುರ, ಮಂಟಪ, ಕೆರೆಕಟ್ಟೆಗಳ ತೀರಗಳನ್ನು ಕಟ್ಟಿಸು ವುದು, ಮಹೋತ್ಸವಗಳನ್ನು ನಡೆಸುವುದು, ನನ್ನ ಮಹಾಪೂಜಾದಿಗಳನ್ನು ಮಾಡಿಸುವುದು ಇವೇ ಮುಂತಾದ ಕಾರ್ಯಗಳನ್ನು ನಡೆಸಿ ಅವೆಲ್ಲವೂ ನನ್ನ ಪೂಜೆ ಯೆಂದೇ ಭಾವಿಸು. ಇದಕ್ಕಾಗಿ ನೀನು ಯೋಚಿಸಬೇಡ ಹೋಗು' ಎಂದನು. ಶಿವನ ಅಪ್ಪಣೆಯಂತೆ ಮಹಾಗೋದನು ತನ್ನ ಪಟ್ಟಣಕ್ಕೆ ಹಿಂತಿರುಗಿ ಬರುವಾಗ ಹಾದಿಯಲ್ಲಿ ಭಸ್ಮಧಾರಣೆ ಮಾಡಿದ್ದ ಓರ್ವ ಅಗಸನನ್ನು ನೋಡಿದನು. ಕೂಡಲೆ ಅರಸನು ಆನೆಯಿಂದ ಇಳಿದು ಅವನಿಗೆ ನಮಸ್ಕಾರ ಮಾಡಿದನು. ಅಗಸನು ಭಯ ಗೊಂಡು ನಾನು ತಾಪಸನಲ್ಲ ಎನ್ನುತ್ತಿರಲು ಆದಕ್ಕೆ ಅರಸನು ನೀನು ಭಸ್ಮಧಾರಣ ಮಾಡಿರುವೆಯಾದ್ದರಿಂದ ಶೈವನೇ ಸರಿ, ನೀನು ನನಗೆ ವಂದ್ಯನು ಎಂದನು. ಓರ್ವ ಅಗಸನಿಗೆ ರಾಜನು ನುಡಿದ ಮಾತುಗಳನ್ನು ಕೇಳಿ ಮಂತ್ರಿಗಳೆಲ್ಲರೂ ಆಶ್ಚರ್ಯ ಪಟ್ಟರು (ಅ. ೫೭).

ಮಹಾಗೋದನು ಸಿಂಹಾಸನವನ್ನೇರಿ ತನ್ನ ಕೀರ್ತಿಯನ್ನು ಎಲ್ಲೆಡೆ ಹರಡಿ ದನು. ಹೀಗಿರುವಲ್ಲಿ, ಒಂದು ದಿನ ಮಧುರಾಪಟ್ಟಣಕ್ಕೆ ಓರ್ವ ಬಡ ಸಂಗೀತಗಾರನು ದ್ರವ್ಯಾಪೇಕ್ಷೆಯಿಂದ ಬಂದು ಅಲ್ಲಿನ ದೇವಾಲಯದಲ್ಲಿ ಕುರಿತು ಕೆಲವು ಕೀರ್ತನೆ ಗಳನ್ನು ಹಾಡಿದನು. ಅಂದು ರಾತ್ರಿ ಶಿವನು ಅವನ ಕನಸಿನಲ್ಲಿ ಬಂದು ಅವನನ್ನು ಎಚ್ಚರಿಸಿ ಕಾಗದವೊಂದನ್ನು ಕೊಟ್ಟು ಅದನ್ನು ಚೋಲರಾಜನಿಗೆ ಕೊಡುವಂತೆ ಹೇಳಿದನು. ಅಂತೆಯೇ ಅವನು ಕೇರಳದೇಶಕ್ಕೆ ಬಂದು ಕೋಟಿ ಕೋಲಾಪುರವೆಂಬ ಬೇರೆ ಹೆಸರುಳ್ಳ ಮಹೋದಯಪುರಕ್ಕೆ ಆಗಮಿಸಿ ಆ ಪತ್ರವನ್ನು ರಾಜನಿಗೆ ಕೊಟ್ಟನು. ಅದನ್ನು ರಾಜನು ತೆಗೆದುಕೊಂಡು ತಲೆಯ ಮೇಲಿಟ್ಟು ಶ್ಲಾಘಿಸುತ್ತ ನಾಟ್ಯವಾಡುತ್ತಾ ಪಾಡುತ್ತಾ ಶಿವನ ಭಕ್ತಿಯಿಂದ ಪರವಶನಾಗಿ ನೆಲದ ಮೇಲೆ ಬಿದ್ದನು. ರಾಜನು ಆ ಸಂಗೀತಗಾರನಿಗೆ ತನ್ನ ಸಮಸ್ತ ಐಶ್ವರ್ಯವನ್ನೂ ರಾಜ್ಯ ವನ್ನೂ ಕಾಣಿಕೆಯಾಗಿ ಕೊಡಹೊರಟನು. ದೇಶಕೋಶಗಳು ತನಗೆ ಬೇಡವೆಂದು ಹೇಳಿ ಆ ಸಂಗೀತಗಾರನು ರಾಜನಿಂದ ತನಗೆ ಬೇಕಾದಷ್ಟು ಹಣವನ್ನು ತೆಗೆದು ಕೊಂಡು ಮಧುರಾಪಟ್ಟಣಕ್ಕೆ ಹೋದನು.

ಶಂಕರನ ಪೂಜಾನಂತರ ನಿತ್ಯವೂ ತಾಂಡವೇಶ್ವರನ ಕಾಲಗೆಜ್ಜೆಯ ಧ್ವನಿ ಯನ್ನು ಕೇಳುತ್ತಿದ್ದ ರಾಜನಿಗೆ ಒಂದು ದಿನ ಅದು ಕೇಳದೆ ಇರಲು, ಶಿವನಿಗೆ

ನಾನೇನು ಅಪರಾಧ ಮಾಡಿದೆನೋ ಎಂದು ಚಿಂತಿಸಿ, ತನ್ನ ಜನ್ಮ ಇನ್ನು ವ್ಯರ್ಥ ವೆಂದು ಭಾವಿಸಿ ತನ್ನ ಎದೆಯನ್ನು ಸೀಳಿಕೊಳ್ಳಲು ಕತ್ತಿಯನ್ನು ಹಿರಿದು ನಿಂತನು. ಆಗ ಆಕಾಶದಿಂದ ಅಶರೀರವಾಣಿಯೊಂದು 'ಓ ರಾಜನೇ ಇಂತಹ ಸಾಹಸಕಾರ್ಯ ವೆಸಗಬೇಡ. ನೀನು ನನ್ನ ಕಣ್ಣಿಗೆ ಸಮನಾಗಿರುವೆ. ಸುಂದರೇಶ್ವರನ ಶ್ರೀ ಗಾನವನ್ನು ಬಹಳ ಕಾಲದಿಂದ ಕೇಳುತ್ತಲಿದ್ದ ನನ್ನಿಂದ ನಾಟ್ಯವಾಡುವುದಕ್ಕೆ ಕೊಂಚ ವಿಲಂಬವಾಯಿತು!' ಎಂದು ನುಡಿಯಿತು. ಶಿವನ ಅಶರೀರವಾಣಿಯನ್ನು ಕೇಳಿದ ರಾಜನು, ಭಕ್ತರಲ್ಲಿ ಮಹಾದೇವನ ದಯೆಯು ಎಷ್ಟು ಅದ್ಭುತವಾಗಿದೆ ಎಂದು ಆಶ್ಚರ್ಯಗೊಂಡನು. ನಾನೂ ಹೇಮಸಭೆಗೆ ಹೋಗಿ ನಟೇಶನಿಗೆ ವಂದಿಸಿ, ಮಹೇಶನ ಪಾದಕಮಲಗಳನ್ನು ನೋಡುವೆನೆಂದು ರಾಜನು ಮಧುರಾಪಟ್ಟಣಕ್ಕೆ ಬಂದನು. ಅಲ್ಲಿ ಶಿವನು ರಾಜನಿಗೆ ತನ್ನ ಕಾಲ್ಗಡಗಗಳ ಧ್ವನಿಯನ್ನು ಕೇಳಿಸಿದನು. ರಾಜನು ಆನಂದಗೊಂಡು ಮಹಾದೇವನನ್ನು ಸ್ತುತಿಸಿ ಅವನ ಪಾದಯುಗಳವನ್ನು ಸೇವಿಸುತ್ತಾ ಕೆಲವು ದಿವಸ ಅಲ್ಲೇ ನೆಲೆಸಿದನು. ಒಮ್ಮೆ ಶಿವನು ರಾಜನ ಕನಸಿನಲ್ಲಿ ಬಂದು 'ಅಯ್ಯಾ, ಮಹಾಗೋದರಾಜನೇ, ಸೌಮ್ಯೇಶ್ವರನ (=ಸುಂದರನ) ಸಂಗೀತವನ್ನು ಕೇಳಿ ನಾನು ನಿನಗೆ ಕಾಲವಿಲಂಬಮಾಡಿದೆನು' ಎಂದನು. ಹೇಮ ಸಭಾಪತಿಯ ಮಾತನ್ನು ಕೇಳಿದ ರಾಜನು ಸೌಮ್ಯೇಶ್ವರನನ್ನು ನೋಡಲು ಶ್ರೀತಿಲ್ಲ ನಗರದಿಂದ ತನ್ನ ಸೇನೆಯೊಡನೆ ಹೊರಟನು. ರಾಜನು ಶಿವಕ್ಷೇತ್ರಗಳಿಗೆಲ್ಲಾ ಹೋಗಿ ನಮಸ್ಕರಿಸಿ ಕಮಲಾಲಯ ಕ್ಷೇತ್ರಕ್ಕೆ ಬಂದನು. ಅಲ್ಲಿ ವಲ್ಮೀಕೇಶ್ವರನಿಗೆ ವಂದಿಸಿ ಸ್ತುತಿಸಿ, ಸುಂದರೇಶ್ವರನನ್ನು ಕಂಡು ಆಲಿಂಗನಮಾಡಿಕೊಂಡು ಅಲ್ಲಿಯೇ ಸಂತೋಷದಿಂದ ರಾಜನು ಬಹುಕಾಲ ವಾಸಮಾಡಿದನು. ಅಲ್ಲಿಂದ ಮುಂದೆ ಮಹಾರಾಜನು ಸುಂದರೇಶ್ವರನ ಜೊತೆಯಲ್ಲಿ ಪಾಂಡ್ಯದೇಶದ ಶಿವದೇವಾಲಯ ಗಳನ್ನೆಲ್ಲಾ ಸಂದರ್ಶಿಸಿ, ನಮಸ್ಕರಿಸಿ ಹಾಲಾಸ್ಯಕ್ಷೇತ್ರಕ್ಕೆ ಬಂದು ತಾಂಡವೇಶ್ವರ ನನ್ನು ಕಂಡು ಧನ್ಯನಾದನು. ಮುಂದೆ ಅವರಿಬ್ಬರೂ ದಾರಿಯಲ್ಲಿ ಸಿಕ್ಕಿದ ಶಿವ ಸ್ಥಾನಗಳಿಗೆಲ್ಲಾ ಹೋಗಿ ಅಲ್ಲಿರುವ ಶಿವಮೂರ್ತಿಗೆ ವಂದಿಸಿ ನಂತರ ಕಾವೇರಿನದಿ ಯನ್ನು ದಾಟಿ, ಅದರ ದಡದಲ್ಲಿದ್ದ ಶಿವದೇವಾಲಯಗಳಿಗೆಲ್ಲಾ ಭೇಟಿಕೊಟ್ಟರು. ಅಲ್ಲಿಂದ ಮುಂದೆ ಪಂಚನದೀ ದಡದಲ್ಲಿರುವ ಶಿವನನ್ನು ದರ್ಶಿಸಿ ಅವರು ಸಂತೋಷ ದಿಂದ ಮಹೋದಯಪುರಕ್ಕೆ ಬಂದು ಅಲ್ಲಿ ಬಗೆಬಗೆಯ ಆಟಗಳನ್ನಾಡುತ್ತಾ ಕೆಲ ಕಾಲವಿದ್ದರು. ಸ್ವಲ್ಪ ದಿವಸಗಳನಂತರ ಕಮಲಾಲಯ ಕ್ಷೇತ್ರಕ್ಕೆ ಸುಂದರೇಶನು ಹೊರಡಲು, ಅವನಿಗೆ ರಾಜನು ಬೇಕಾದಷ್ಟು ಹಣವನ್ನೂ ಚಿತ್ರವಿಚಿತ್ರ ಬಟ್ಟೆ ಗಳನ್ನೂ ಅಮೂಲ್ಯವಾದ ಆಭರಣಗಳನ್ನೂ ಕೊಟ್ಟು ಸುಂದರೇಶನ ಜೊತೆಯಲ್ಲಿಯೇ ಬಹುದೂರ ತಾನೂ ಹೋಗಿ ಕಳುಹಿಸಿಕೊಟ್ಟನು (೫೮. ೧–೩೧).